KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜೂನ್ ೨೯, ೨೦೦೬ (ಆಷಾಢ ೮, ಶಕ ವರ್ಷ ೧೯೨೮) | ಸಂಚಿಕೆ ೨೬ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಒಳಾಡಳಿತ ಸಚಿವಾಲಯ**

**ವಿಷಯ:** ಸರ್ಕಾರಿ ಅಭಿಯೋಜಕರು/ಅಭಿಯೋಗ ಉಪನಿರ್ದೇಶಕರ ಸ್ಥಾನಪನ್ನ ಅವಧಿಯನ್ನು ಘೋಷಿಸುವ ಬಗ್ಗೆ

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ನಂ. ಲಾ 80 ಪಿಪಿಇ 91, ದಿನಾಂಕ 28.9.1991
2) ಸರ್ಕಾರದ ಅಧಿಸೂಚನೆ ನಂ. ಲಾ 221 ಪಿಪಿಇ 91, ದಿನಾಂಕ 9.6.1992
3) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಅ.ಸ.ಪತ್ರ ನಂ. ಡಿಪಿಎನ್/ಸಿಶಾ-1 /306/2005-06, ದಿನಾಂಕ 6.1.2006.

**ಪ್ರಸ್ತಾವನೆ:-**

ಮೇಲೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಗಳಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ಸಹಾಯಕ ಅಭಿಯೋಗ ನಿರ್ದೇಶಕರ ವೃಂದದಿಂದ ಸರ್ಕಾರಿ ಅಭಿಯೋಜಕರು/ಅಭಿಯೋಗ ಉಪನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಅವಧಿಯ ಮೇರೆಗೆ ಈ ಕೆಳಕಂಡ ಅಧಿಕಾರಿಗಳಿಗೆ ಮುಂಬಡ್ತಿ ನೀಡಲಾಗಿರುತ್ತದೆ. ಮತ್ತು ಈ ಅಧಿಕಾರಿಗಳು ತಮ್ಮ ಒಂದು ವರ್ಷದ ಸ್ಥಾನಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸಿರುತ್ತಾರೆ ಎಂದು ಘೋಷಿಸುವ ಬಗ್ಗೆ ಮೇಲೆ (3)ರ ದಿನಾಂಕ 6.1.2006ರ ಪತ್ರದಲ್ಲಿ ಅಭಿಯೋಗ ನಿರ್ದೇಶಕರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

(1) ಶ್ರೀಮತಿ ಹೆಚ್.ಆರ್. ರೇಣುಕಾ, ಅಭಿಯೋಗ ಉಪ ನಿರ್ದೇಶಕರು, ಗೃಹ ಇಲಾಖೆ (ನಿಯೋಜನೆ ಮೇರೆಗೆ)
(2) ಶ್ರೀ ವಿದ್ಯಾಧರ್, ಸರ್ಕಾರಿ ಅಭಿಯೋಜಕರು, ವಿಶೇಷ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗುಲ್ಬರ್ಗ
(3) ಎ.ಐ.ಶಾಂತಪ್ಪ (ಈಶ್ವರ ಇಂಗಳಹಳ್ಳಿ), ಪ್ರಧಾನ ಸರ್ಕಾರಿ ಅಭಿಯೋಜಕರು, ವಿಶೇಷ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಳ್ಳಾರಿ

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 92 ಪಿಪಿಇ 2006, ಬೆಂಗಳೂರು, ದಿನಾಂಕ 20ನೇ ಮೇ 2006**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಅಭಿಯೋಗ ಉಪನಿರ್ದೇಶಕರು / ಸರ್ಕಾರಿ ಅಭಿಯೋಜಕರಾಗಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ತ:ಖ್ತೆಯ ಅಂಕಣ (2)ರಲ್ಲಿ ಸೂಚಿಸಿರುವ ಅಧಿಕಾರಿಗಳ ಒಂದು ವರ್ಷದ ಸ್ಥಾನಪನ್ನ ಅವಧಿಯನ್ನು ಅವರ ಹೆಸರಿನ ಎದುರು ಸೂಚಿಸಿರುವ ಅಂಕಣ (4)ರಲ್ಲಿ ನಮೂದಿಸಿರುವ ದಿನಾಂಕದಿಂದ ಜಾರಿಗೆ ಬರುವಂತೆ ತೃಪ್ತಿಕರವಾಗಿ ಪೂರ್ಣಗೊಳಿಸಿರುತ್ತಾರೆಂದು ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ 19(3)(ಸಿ) ಅನುಸಾರ ಘೋಷಿಸಲಾಗಿದೆ.

| ಕ್ರ. ಸಂ. | ಸರ್ಕಾರಿ ಅಭಿಯೋಜಕರ/ಅಭಿಯೋಗ ಉಪ ನಿರ್ದೇಶಕರ ಹೆಸರು ಮತ್ತು ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಸ್ಥಳ | ಮುಂಬಡ್ತಿ ಪಡೆದಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕ | ಸ್ಥಾನಪನ್ನ ಅವಧಿ ತೃಪ್ತಿಕರವಾಗಿ ಪೂರ್ಣಗೊಳಿಸಿರುತ್ತಾರೆಂದು ಘೋಷಿಸ ಬೇಕಾದ ದಿನಾಂಕ |
|---|---|---|---|
| 1 | 2 | 3 | 4 |
| 1. | ಶ್ರೀಮತಿ ಹೆಚ್.ಆರ್. ರೇಣುಕ, ಅಭಿಯೋಗ ಉಪನಿರ್ದೇಶಕರು, ಗೃಹ ಇಲಾಖೆ (ನಿಯೋಜನೆ ಮೇರೆಗೆ) | 30.9.1991 | 30.9.1992 |

| 1 | 2 | 3 | 4 |
|---|---|---|---|
| 2. | ಶ್ರೀ ವಿದ್ಯಾಧರ್, ಸರ್ಕಾರಿ ಅಭಿಯೋಜಕರು, ವಿಶೇಷ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗುಲ್ಬರ್ಗ | 8.7.1992 | 8.7.1993 |
| 3. | ಶ್ರೀ ಐ.ಐ. ಶಾಂತಪ್ಪ (ಈಶ್ವರ ಇಂಗಳಹಳ್ಳಿ), ಪ್ರಧಾನ ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಳ್ಳಾರಿ | 27.6.1992 | 27.6.1993 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
**ಆರ್.ಎ.ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ. ಮತ್ತು ಸು. ಮತ್ತು ಅಭಿಯೋಗಗಳು)

ಪಿ.ಆರ್. 826

**ಸಿಬ್ಬಂದಿ ಮತ್ತು ಆಡಳಿತ ಸುಧಾರಣ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಗಂಗಯ್ಯ, ನಿರ್ದೇಶಕರು, ಸರ್ಕಾರಿ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ-ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ನೋಟೀಸ್ ಸಂಖ್ಯೆ:ಸಿಆಸುಇ 127 ಎಸ್ಇಎಸ್ 04 ದಿನಾಂಕ:01.04.05.
2. ಶ್ರೀ ಹೆಚ್.ಗಂಗಯ್ಯ, ನಿರ್ದೇಶಕರು, ಸರ್ಕಾರಿ ಮುದ್ರಣಾಲಯ ರವರ ದಿನಾಂಕ:27.04.05ರ ಲಿಖಿತ ಉತ್ತರ.

**ಪ್ರಸ್ತಾವನೆ:-**

ನಿರ್ದೇಶಕರು, ಸರ್ಕಾರಿ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಆಗಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಶ್ರೀ ಹೆಚ್.ಗಂಗಯ್ಯ ಅವರು ಸರ್ಕಾರದ ಮಹತ್ವದ ಯೋಜನೆಯಾದ ಉಚಿತ ಪಠ್ಯ ಪುಸ್ತಕಗಳ ಮುದ್ರಣ ಮತ್ತು ಸರಬರಾಜಿನ ವಿಷಯದಲ್ಲಿ ಡಿಸೆಂಬರ್ 2004ರವರೆಗೆ ಪೂರ್ಣ ಪ್ರಮಾಣದಲ್ಲಿ ಪುಸ್ತಕಗಳನ್ನು ಮುದ್ರಿಸಿ ಹಂಚದೆ 71.00 ಲಕ್ಷ ಫಲಾನುಭವಿ ಮಕ್ಕಳು ಪಠ್ಯ ಪುಸ್ತಕಗಳಿಲ್ಲದೆ ಅವರ ಶೈಕ್ಷಣಿಕ ನಷ್ಟಕ್ಕೆ ಕಾರಣರಾಗಿರುವ ಮತ್ತು ಯೋಜನೆಯು ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳದೆ ವಿಫಲವಾಗಲು ಹಾಗೂ ಸರ್ಕಾರವು ಸದನದಲ್ಲಿ ನೀಡಿದ ಭರವಸೆಯಂತೆ ನಿಗದಿತ ಸಮಯದೊಳಗೆ ಪಠ್ಯ ಪುಸ್ತಕಗಳನ್ನು ಮುದ್ರಿಸಿ ಸರಬರಾಜು ಮಾಡದ ಹಾಗೂ ಉಚಿತ ಪಠ್ಯ ಪುಸ್ತಕಗಳ ಮುದ್ರಣ ಕಾರ್ಯದ ಬಗ್ಗೆ ಸರ್ಕಾರದ ಶಿಕ್ಷಣ ಇಲಾಖೆಯ ಸಕ್ಷಮ ಪ್ರಾಧಿಕಾರದೊಂದಿಗೆ ವ್ಯವಹರಿಸದ ಆರೋಪಕ್ಕಾಗಿ ಶ್ರೀ ಹೆಚ್.ಗಂಗಯ್ಯ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ:01.04.05ರ ನೋಟೀಸ್‌ನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರನ್ವಯ ಜಾರಿ ಮಾಡುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಶ್ರೀ ಹೆಚ್.ಗಂಗಯ್ಯ, ನಿರ್ದೇಶಕರು, ಸರ್ಕಾರಿ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ:27.04.05ರ ಲಿಖಿತ ಉತ್ತರ ಸಲ್ಲಿಸಿ, ದಿ:31.12.03ರಂದು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ಕಾರ್ಯದರ್ಶಿಯವರಿಗೆ ಬರೆದಿರುವ ಪತ್ರದಲ್ಲಿ ಪಠ್ಯ ಪುಸ್ತಕ ಮುದ್ರಣವನ್ನು 2004-05ನೇ ಸಾಲಿನಲ್ಲಿ ತೆಗೆದುಕೊಳ್ಳಲು ಸಾಧ್ಯವಾಗದಿರುವುದಕ್ಕೆ ಸ್ಪಷ್ಟ ಕಾರಣಗಳನ್ನು ತಿಳಿಸಲಾಗಿರುತ್ತದೆ. 2004-05ನೇ ಸಾಲಿನ ಉಚಿತ ಪಠ್ಯ ಪುಸ್ತಕಗಳನ್ನು ಕಾರ್ಯದರ್ಶಿ, ಶಿಕ್ಷಣ ಇಲಾಖೆ ಅವರಿಗೆ ತಾವು ಸೇರಿದಂತೆ, ನಿರ್ದೇಶಕರು DSERT, ಪ್ರಾಚಾರ್ಯರು, GIPT, ಇವರುಗಳು ಸಲ್ಲಿಸಿದ ಕ್ರಿಯಾ ಯೋಜನೆಯಲ್ಲಿಯೂ ಸಹ ಈ ಬಗ್ಗೆ ಸ್ಪಷ್ಟವಾಗಿ ತಿಳಿಸಲಾಗಿರುತ್ತದೆ. ತಾವು ಜಲಸಂಪನ್ಮೂಲ ಸಚಿವರು ಸೇರಿದಂತೆ ಯಾರಿಗೂ ದಿ:03.08.04ರಂದು 8 ದಿನಗಳ ಒಳಗಾಗಿ ಪೂರ್ಣ ಪ್ರಮಾಣದಲ್ಲಿ ಪಠ್ಯ ಪುಸ್ತಕಗಳನ್ನು ಪೂರೈಸುವುದಾಗಿ ಲಿಖಿತವಾಗಿ ತಿಳಿಸಿರುವುದಿಲ್ಲ; ಪಠ್ಯ ಪುಸ್ತಕ ಮುದ್ರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಪತ್ರ ವ್ಯವಹಾರಗಳನ್ನು ಶಿಕ್ಷಣ ಇಲಾಖೆಯೊಂದಿಗೆ ನಡೆಸಿದ್ದು, ಅಗತ್ಯವಿರುವಲ್ಲಿ ಮಾತ್ರ ಶಿಕ್ಷಣ ಇಲಾಖೆಗೆ ಬರೆದ ಪತ್ರಗಳ ಪ್ರತಿಗಳನ್ನು ಆರ್ಥಿಕ ಇಲಾಖೆಗೆ ಕಳುಹಿಸಿರುವುದಾಗಿಯೂ ಪಠ್ಯ ಪುಸ್ತಕ ಮುದ್ರಣಕ್ಕೆ ಸಂಬಂಧಿಸಿದಂತೆ ದಿನವಹಿ/ವಾರಂಪ್ರತಿ ವರದಿಗಳನ್ನು ಸಭೆಗಳಲ್ಲಿ ಸರ್ಕಾರದ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಅವರಿಗೆ ಸಲ್ಲಿಸಲಾಗಿರುತ್ತದೆ ಎಂದೂ ದಿ:26.10.04ರಂದು ನಿರ್ದೇಶಕರು, DSERT ಅವರು ಪ್ರಧಾನ ಕಾರ್ಯದರ್ಶಿಯವರಿಗೆ ಬರೆದ ಪತ್ರದಲ್ಲಿ ಶೇಕಡ 99ರಷ್ಟು ಪಠ್ಯ ಪುಸ್ತಕಗಳು ಸರಬರಾಜಾಗಿರುವುದಕ್ಕೆ ಅವರು ಲಿಖಿತ ಮೂಲಕ ಖಚಿತಪಡಿಸಿರುತ್ತಾರೆ ಎಂದೂ ತಿಳಿಸಿರುವರು.

ಪಠ್ಯ ಪುಸ್ತಕ ಮುದ್ರಣ ವ್ಯವಸ್ಥೆ ಮಾಡುವ ಮೊದಲು ಕಾಲಾವಕಾಶವಿಲ್ಲದ ಕಾರಣ ಸರ್ಕಾರದ ಮಟ್ಟದ ಸಭೆಗಳಲ್ಲಿ ವಿಷಯವನ್ನು ಪ್ರಸ್ತಾಪಿಸಿ ಸಭೆಯಲ್ಲಿ ಕೈಗೊಂಡ ತೀರ್ಮಾನದನ್ವಯ ಹಾಗೂ ಸರ್ಕಾರದ ಅಧಿಸೂಚನೆ/ಆದೇಶ ಪಡೆದ ನಂತರವಷ್ಟೆ ಈ ಬಗ್ಗೆ ಕ್ರಮ ವಹಿಸಲಾಗಿರುತ್ತದೆ. 2004-05ನೇ ಸಾಲಿನ ಶೈಕ್ಷಣಿಕ ವರ್ಷದ ಪಠ್ಯ ಪುಸ್ತಕಗಳ ಮುದ್ರಣವನ್ನು ದಿ:02.04.04ರಂದು ತಡವಾಗಿ ವಹಿಸಿರುವುದು ವಿಳಂಬಕ್ಕೆ ಪ್ರಮುಖ ಕಾರಣವಾಗಿರುತ್ತದೆ. ಸ್ಥಳೀಯವಾಗಿ ಅಂಗೀಕೃತ ಖಾಸಗಿ ಮುದ್ರಣಾಲಯಗಳಲ್ಲಿ ವಹಿಸಿ ಸರ್ಕಾರದಿಂದ ಕಾಗದವನ್ನು ಸರಬರಾಜು ಮಾಡಿ ಸರ್ಕಾರದ ಅನುಮೋದಿತ ಗಡವುಗಳಲ್ಲಿ ಮುದ್ರಣ ಕೆಲಸವನ್ನು ವಹಿಸುವ ಅವಕಾಶವನ್ನು ನಿರ್ಬಂಧಿಸಿ ಮೊದಲಿನ ಪದ್ಧತಿಯನ್ನು ಬದಲಿಸುವಲ್ಲಿ ಕಾರಣವಾಗಿರುತ್ತದೆ. ಪಠ್ಯ ಪುಸ್ತಕ ಮುದ್ರಣಕ್ಕೆ ಅಗತ್ಯವಾಗಿ ಬೇಕಾಗಿದ್ದ 4 ವರ್ಣದ ಮುದ್ರಣ ಯಂತ್ರಗಳ ಅಲಭ್ಯತೆ ಹಾಗೂ ಇನ್ನಿತರೆ ಸೌಲಭ್ಯಗಳು ಲಭ್ಯವಿಲ್ಲದ ಕಾರಣ ಅವುಗಳನ್ನು ನಿಯಮಾನುಸಾರ ಪಡೆದ ನಂತರ ಪಠ್ಯ ಪುಸ್ತಕಗಳನ್ನು ಮುದ್ರಣ ಮಾಡಿರುವುದು ವಿಳಂಬಕ್ಕೆ ಕಾರಣವಾಗಿರುತ್ತದೆ. ಯಂತ್ರೋಪಕರಣಗಳನ್ನು ಸ್ಥಾಪಿಸಲು ಮೂಲಭೂತ ಸೌಕರ್ಯಗಳನ್ನು ಒದಗಿಸಿ ವಿದ್ಯುತ್ ಸರಬರಾಜನ್ನು ಪಡೆಯಲು ಕನಿಷ್ಠ ಕಾಲಾವಧಿಯ ಅಗತ್ಯವಿದ್ದುದರಿಂದ ವಿಳಂಬವಾಗಿರುತ್ತದೆ. DSERTಯಿಂದ ಪಠ್ಯ ಪುಸ್ತಕಗಳನ್ನೊಳಗೊಂಡ ಸರಿಯಾದ ಸಿ.ಡಿ.ಗಳನ್ನು ಒದಗಿಸದೇ ಇರುವುದು ಹಾಗೂ ಪಠ್ಯ ಪುಸ್ತಕಗಳನ್ನು ಬಿಟ್ಟು ಬೇರ್ಯಾವುದೋ ವಿಷಯಗಳಿದ್ದ ಸಿ.ಡಿ.ಗಳನ್ನು ಒದಗಿಸಿದ್ದು, ಹಾಗೂ ಕೆಲವೊಂದು ಸಿ.ಡಿ.ಗಳು ಸರಿಯಾಗಿ ಕಾಪಿಯಾಗದೇ ದೋಷಪೂರಿತವಾಗಿ ಇದ್ದುದು ಇತ್ಯಾದಿಗಳು ವಿಳಂಬಕ್ಕೆ ಕಾರಣವಾಗಿರುತ್ತದೆ. ಪಠ್ಯವಸ್ತುವನ್ನು ಕ್ರೌನ್ 1/4 ಅಳತೆಯಿಂದ ಮೆಟ್ರಿಕ್ ಅಳತೆಗೆ (ಎ4-ಎ5) ಪರಿವರ್ತಿಸಿ ಅನುಮೋದನೆ ಪಡೆಯಲು ಉಂಟಾದ ಕಾಲಾವಕಾಶ ವಿಳಂಬಕ್ಕೆ ಕಾರಣವಾಗಿರುತ್ತದೆ. ಮೈಸೂರು ಕಾಗದ ಕಾರ್ಖಾನೆಯಿಂದ ಮುದ್ರಣ ಕಾಗದ ಸರಬರಾಜಿನಲ್ಲಿ ವ್ಯತ್ಯಯ ಆಗಿದ್ದರಿಂದ ಪಠ್ಯ ಪುಸ್ತಕ ಸರಬರಾಜಿಗೆ ವಿಳಂಬವಾಗಿರುತ್ತದೆ. ಭಾರತದಾದ್ಯಂತ ನಡೆದ ಲಾರಿ ಮುಷ್ಕರದಿಂದಾಗಿ ಕಾಗದ ಸರಬರಾಜು ಸಂಪೂರ್ಣ ಸ್ಥಗಿತಗೊಂಡು ಮುದ್ರಿತ ಪಠ್ಯ ಪುಸ್ತಕಗಳ ರವಾನೆ ಸ್ಥಗಿತಗೊಂಡು ಮುದ್ರಣ ಪೂರ್ವ ಮತ್ತು ನಂತರ ಉಂಟಾದ ವ್ಯತ್ಯಯಗಳಿಂದಾಗಿ ಪಠ್ಯ ಪುಸ್ತಕಗಳ ಸರಬರಾಜಿನಲ್ಲಿ ವಿಳಂಬವಾಗಿರುತ್ತದೆ. ಹಾಗೂ ಸರ್ಕಾರಿ ಮುದ್ರಣಾಲಯಗಳಲ್ಲಿ ಸಿಬ್ಬಂದಿ ಕೊರತೆ ಪ್ರಮುಖವಾಗಿ ಹೊಸ ತಂತ್ರಜ್ಞಾನದ ಸಿಬ್ಬಂದಿ, ಮೇಲ್ವಿಚಾರಕ ಹಾಗೂ ಅಧಿಕಾರಿಗಳ ಕೊರತೆಯಿಂದಾಗಿ ಪಠ್ಯ ಪುಸ್ತಕ ವಿತರಿಸುವಲ್ಲಿ ವಿಳಂಬವಾಗಲು ಕಾರಣವಾಗಿರುವುದರಿಂದ ಈ ಮೇಲ್ಕಂಡ ವ್ಯತ್ಯಯಗಳಲ್ಲಿ ಹಾಗೂ ಅಂಶಗಳಲ್ಲಿ ತಮ್ಮೊಬ್ಬರ ಪಾತ್ರವೇನು ಇರುವುದಿಲ್ಲವಾದ್ದರಿಂದ ಈ ಎಲ್ಲಾ ಪ್ರಕ್ರಿಯೆಯು ಸಾಮೂಹಿಕ ಜವಾಬ್ದಾರಿಯ ಪ್ರಕ್ರಿಯೆಯಾಗಿರುವುದರಿಂದ ತಮ್ಮ ಉತ್ತರವನ್ನು ಒಪ್ಪಿ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಸದರಿ ಅಧಿಕಾರಿಯವರ ಉತ್ತರವನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿ, 2004-05ನೇ ಸಾಲಿನ ಶೈಕ್ಷಣಿಕ ವರ್ಷದ ಉಚಿತ ಪಠ್ಯ ಪುಸ್ತಕಗಳ ಮುದ್ರಣವನ್ನು ತಡವಾಗಿ ಮುದ್ರಣಕ್ಕೆ ವಹಿಸಲಾಗಿರುತ್ತದೆ. 4 ವರ್ಣದ ಮುದ್ರಣ ಯಂತ್ರಗಳು ಹಾಗೂ ಇನ್ನಿತರೆ ಸೌಲಭ್ಯಗಳು ಲಭ್ಯವಿಲ್ಲದಿದ್ದರೂ ಸಹ ಉಚಿತ ಪಠ್ಯ ಪುಸ್ತಕಗಳನ್ನು ಮುದ್ರಿಸಲು ಕೊಡಲಾಗಿರುತ್ತದೆ. ಈ ಉಚಿತ ಪಠ್ಯ ಪುಸ್ತಕ ಹಾಗೂ ಮಾರಾಟದ ಪಠ್ಯ ಪುಸ್ತಕಗಳನ್ನು ಸರ್ಕಾರಿ ಮುದ್ರಣಾಲಯದಲ್ಲಿ ಮುದ್ರಿಸುವ ಕುರಿತಂತೆ ರಚಿಸಲಾದ ಅಧಿಕಾರಸ್ತ ಸಮಿತಿಯಲ್ಲಿ ಶ್ರೀ ಗಂಗಯ್ಯ ಇವರು ಸದಸ್ಯ ಕಾರ್ಯದರ್ಶಿ ಮಾತ್ರ  ಆಗಿರುತ್ತಾರೆ. ಅಂದ ಮೇಲೆ ಯಾವುದೇ ತೀರ್ಮಾನವನ್ನು ಅವರೊಬ್ಬರೇ ತೆಗೆದುಕೊಳ್ಳಲಾಗುವುದಿಲ್ಲ.ಶ್ರೀ ಎಸ್.ಎಂ.ಆಚಾರ್ಯ, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಆಡಳಿತ ಸುಧಾರಣೆ) ಅವರ ವರದಿಯ ಆಧಾರದಲ್ಲಿ ಶ್ರೀ ಗಂಗಯ್ಯ ಅವರ ವಿರುದ್ಧ ಮಾಡಲಾದ ಆರೋಪವನ್ನು ಸಮರ್ಥಿಸಿಕೊಳ್ಳಲು ಹಾಗೂ ಅವರೊಬ್ಬರನ್ನೇ ಜವಾಬ್ದಾರರನ್ನಾಗಿ ಮಾಡಿ ಶಿಸ್ತಿನ ಕ್ರಮವನ್ನು ಮುಂದುವರಿಸಲು ಅವಕಾಶವಿಲ್ಲದ ಹಿನ್ನೆಲೆಯಲ್ಲಿ ಅವರು ಸಲ್ಲಿಸಿರುವ ಲಿಖಿತ ಉತ್ತರವನ್ನು ಒಪ್ಪಿ ಅವರಿಗೆ ಇನ್ನು ಮುಂದೆ ಇಂತಹ ಪ್ರಸಂಗಗಳಿಗೆ ಅವಕಾಶ ನೀಡದಂತೆ ಜಾಗ್ರತೆ ವಹಿಸುವಂತೆ  ಎಚ್ಚರಿಕೆಯನ್ನು ನೀಡಿ ಅವರನ್ನು ಆರೋಪಮುಕ್ತರನ್ನಾಗಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 127 ಎಸ್‌ಇಎನ್ 04 ಬೆಂಗಳೂರು ದಿನಾಂಕ:28ನೇ ಜೂನ್ 2006.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಶ್ರೀ ಹೆಚ್.ಗಂಗಯ್ಯ, ನಿರ್ದೇಶಕರು, ಸರ್ಕಾರಿ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಅವರನ್ನು ದಿನಾಂಕ:01.04.05ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ. ಹಾಗೂ ಇನ್ನು ಮುಂದೆ ಈ ರೀತಿಯ ಪ್ರಸಂಗಗಳಿಗೆ ಅವಕಾಶ ನೀಡದಂತೆ ಜಾಗ್ರತೆ ವಹಿಸುವಂತೆ ಎಚ್ಚರಿಕೆಯನ್ನು  ನೀಡಲಾಗಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀ ಹೆಚ್.ಗಂಗಯ್ಯ, ನಿರ್ದೇಶಕರು, ಸರ್ಕಾರಿ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್. 991

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ :** 2005-06ನೇ ಸಾಲಿನಲ್ಲಿ ಪರಿಶಿಷ್ಟ ವರ್ಗದ ವಿದ್ಯಾವಂತ ನಿರುದ್ಯೋಗಿ ಅಭ್ಯರ್ಥಿಗಳಿಗೆ ಪ್ರೋಫೆಷನಲ್ ಏರ್‌ಕ್ರಾಫ್ಟ್ ಪೈಲೆಟ್ ತರಬೇತಿ ನೀಡುವ ಕುರಿತು

**ಓದಲಾಗಿದೆ :**
1. 2005-06ನೇ ಸಾಲಿನ ಮಾನ್ಯ ಉಪ ಮುಖ್ಯ ಮಂತ್ರಿಗಳು, ಮಂಡಿಸಿದ ಆಯವ್ಯಯ ಭಾಷಣ
2. ಸರ್ಕಾರಿ ಆದೇಶ ಸಂಖ್ಯೆ:ಸಕಇ 47 ಎಸ್‌ಎಲ್‌ಪಿ 2005, ದಿನಾಂಕ:28-5-2005
3. ದಿನಾಂಕ 2-12-2005ರಂದು ನಡೆದ ಅಧಿಕಾರಯುಕ್ತ ಸಮಿತಿ ನಡವಳಿಗಳು
4. ಸರ್ಕಾರಿ ಆದೇಶ ಸಂಖ್ಯೆ:ಸಕಇ 411ಪವಯೋ 2005 ದಿನಾಂಕ:15-12-2005
5. ಸರ್ಕಾರಿ ಆದೇಶ ಸಂಖ್ಯೆ:ಸಕಇ 52 ಎಸ್‌ಎಲ್‌ಪಿ 2005 ದಿನಾಂಕ:31-1-2006
6. ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ ಬೆಂಗಳೂರು ರವರ ಏಕಕಡತ ಪ್ರಸ್ತಾವನೆ ಸಂಖ್ಯೆ:ಪವಕನಿ/ಗಿ ಉಯೋ: ಸಿಆರ್-8:05-06, ದಿ:4-5-2006

**ಪ್ರಸ್ತಾವನೆ:**

2005-06ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸರ್ಕಾರವು ಈ ಕೆಳಕಂಡಂತೆ ಘೋಷಿಸಿದೆ.

ಬೆಂಗಳೂರಿನಲ್ಲಿರುವ ಸರ್ಕಾರಿ ವಿಮಾನ ಹಾರಾಟ ತರಬೇತಿ ಶಾಲೆಯು ಸಮಾಜ ಕಲ್ಯಾಣ ಇಲಾಖೆಯ ಸಹಯೋಗದೊಂದಿಗೆ ಪರಿಶಿಷ್ಟ ಜಾತಿ/ಪಂಗಡ ವಿದ್ಯಾರ್ಥಿಗಳಿಗೆ ವಿಮಾನ ಹಾರಾಟ ತರಬೇತಿಯನ್ನು ನೀಡುವ ವಿನೂತನ ಯೋಜನೆಯನ್ನು ಪ್ರಾರಂಭಿಸಿದೆ. ಆರಂಭದಲ್ಲಿ ಹತ್ತು ಮಂದಿ ಪರಿಶಿಷ್ಟ ಜಾತಿ/ಪಂಗಡದ ವಿದ್ಯಾರ್ಥಿಗಳಿಗೆ ತರಬೇತಿ ನೀಡಲಾಗುವುದು. ಮುಂದಿನ ವರ್ಷಗಳಲ್ಲಿ ಹೆಚ್ಚು ಮಂದಿಗೆ ತರಬೇತಿ ನೀಡಲಾಗುವುದು.

ಮೇಲೆ ಕ್ರಮ ಸಂಖ್ಯೆ(3)ರ ನಡವಳಿಯನ್ವಯ 3 ಪರಿಶಿಷ್ಟ ವರ್ಗದ ನಿರುದ್ಯೋಗಿ ಅಭ್ಯರ್ಥಿಗಳಿಗೆ ಪ್ರೋಫೆಷನಲ್ ಏರಕ್ರಾಫ್ಟ್ ಪೈಲೆಟ್ ತರಬೇತಿ ನೀಡಲು ತಗಲುವ ವೆಚ್ಚವನ್ನು 2005-06ನೇ ಸಾಲಿನಲ್ಲಿ ಗಿರಿಜನ ಉಪ ಯೋಜನೆಯಡಿ ಕ್ರೋಢೀಕರಿಸಿದ ಹಣದಲ್ಲಿ ಸರ್ಕಾರದ ಆದೇಶ ಸಂಖ್ಯೆ ಸಕಇ 47 ಎಸ್‌ಎಲ್‌ಪಿ 2005, ದಿನಾಂಕ:28-5-2005ರಲ್ಲಿ ಪರಿಶಿಷ್ಟ ವರ್ಗದ ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳಿಗೆ ಭೋಜನಾ ವೆಚ್ಚ ಪರಿಷ್ಕರಣೆ ವೆಚ್ಚಕ್ಕಾಗಿ ಒದಗಿಸಲಾಗಿರುವ ರೂ.70.00ಲಕ್ಷಗಳಲ್ಲಿ ಉಳಿತಾಯವಾಗುವ ಹಣದಲ್ಲಿ ಭರಿಸಲು ಸರ್ಕಾರವು ಅನುಮತಿ ನೀಡಿ ಕಾರ್ಯಕ್ರಮವನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದ ನಿಯಮಗಳನ್ವಯ ಅನುಷ್ಠಾನಗೊಳಿಸಲು ಆದೇಶಿಸಲಾಗಿರುತ್ತದೆ. ಕ್ರಮ ಸಂಖ್ಯೆ(5)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2005-06ನೇ ಸಾಲಿಗೆ ಸಮಾಜ ಕಲ್ಯಾಣ ಇಲಾಖೆಯವತಿಯಿಂದ ವಿದ್ಯಾವಂತ ನಿರುದ್ಯೋಗಿ ಅಭ್ಯರ್ಥಿಗಳಿಗೆ ಪ್ರೋಫೆಷನಲ್ ಏರ್‌ಕ್ರಾಫ್ಟ್ ಪೈಲೆಟ್ ತರಬೇತಿ ನೀಡಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದ ನಿಯಮಗಳನ್ವಯ ಟೆಂಡರ್ ಕರೆದು ಇದರಲ್ಲಿ ಅರ್ಹತೆ ಹೊಂದಿದ ಹಾಗೂ ಕಡಿಮೆ ದರ ನಮೂದಿಸಿರುವ ವಿಂಗ್ಸ್ ಏವಿಯೇಷನ್ ಲಿಮಿಟೆಡ್, ಹೈದರಾಬಾದ ಇವರ ಮುಖಾಂತರ ಪ್ರತಿ ಅಭ್ಯರ್ಥಿಗೆ ರೂ.11.00ಲಕ್ಷಗಳ ವೆಚ್ಚದಲ್ಲಿ ತರಬೇತಿ ನೀಡಲು ಸರ್ಕಾರವು ಆದೇಶಿಸಿರುತ್ತದೆ.

ಮೇಲೆ ಕ್ರಮ ಸಂಖ್ಯೆ(6)ರಲ್ಲಿ ಓದಲಾದ ಏಕಕಡತ ಪ್ರಸ್ತಾವನೆಯಲ್ಲಿ ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು ಇವರು ದಿನಾಂಕ: 2-12-2005ರಂದು ನಡೆದ ಅಧಿಕಾರಯುಕ್ತ ಸಮಿತಿಯ ನಡವಳಿಯನ್ವಯ, ಸಮಾಜ ಕಲ್ಯಾಣ ಇಲಾಖೆಯಿಂದ ಟೆಂಡರ್ ಕರೆದು ನಿಗದಿಪಡಿಸಿರುವ ಮೆ:ವಿಂಗ್ಸ್ ಏವಿಯೇಷನ್ ಲಿಮಿಟೆಡ್, ಹೈದರಾಬಾದ್ ಈ ಸಂಸ್ಥೆಯ ವತಿಯಿಂದ ಪರಿಶಿಷ್ಟ ವರ್ಗದ 5 ನಿರುದ್ಯೋಗಿ ಅರ್ಹ ಅಭ್ಯರ್ಥಿಗಳಿಗೆ, ಪ್ರತಿ ಅಭ್ಯರ್ಥಿಗೆ ರೂ.11.00ಲಕ್ಷ ವೆಚ್ಚದಲ್ಲಿ ಪ್ರೋಫೆಷನಲ್ ಏರಕ್ರಾಫ್ಟ್ ಪೈಲೆಟ್ ತರಬೇತಿ ನೀಡಲು ಅನುಮೋದನೆ ನೀಡಿ, ಈ ಕಾರ್ಯಕ್ರಮಕ್ಕೆ ತಗಲುವ ಹೆಚ್ಚುವರಿ ರೂ.2.2805ಲಕ್ಷಗಳನ್ನು 2006-07ನೇ ಸಾಲಿನಲ್ಲಿ ಒದಗಿಸಿರುವ ಅನುದಾನದಲ್ಲಿ ಭರಿಸಲು ಅನುಮತಿ ನೀಡಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು ಇವರು ಪ್ರಸ್ತಾವನೆಯನ್ನು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 181 ಪವಯೋ 2005, ಬೆಂಗಳೂರು, ದಿನಾಂಕ:17ನೇ ಮೇ 2006**

2005-06ನೇ ಸಾಲಿಗೆ ಪ್ರೋಫೆಷನಲ್ ಏರಕ್ರಾಫ್ಟ್ ಪೈಲೆಟ್ ಕೋರ್ಸ್‌ನಲ್ಲಿ 5 ಪರಿಶಿಷ್ಟ ವರ್ಗದ ಅರ್ಹ ಅಭ್ಯರ್ಥಿಗಳಿಗೆ ಮೆ:ವಿಂಗ್ಸ್ ಏವಿಯೇಷನ್ ಲಿಮಿಟೆಡ್, ಹೈದರಾಬಾದ್ ಇವರ ಮುಖಾಂತರ ಪ್ರತಿ ಅಭ್ಯರ್ಥಿಗೆ ರೂ.11.00ಲಕ್ಷಗಳ ವೆಚ್ಚದಲ್ಲಿ ತರಬೇತಿ ನೀಡಲು ಆದೇಶಿಸಿದೆ.

ಈ ಯೋಜನೆಗೆ ತಗಲುವ ವೆಚ್ಚ ರೂ.55.00ಲಕ್ಷಗಳ ಪೈಕಿ ರೂ.52,71,950.00ಲಕ್ಷಗಳನ್ನು 2005-06ನೇ ಸಾಲಿನಲ್ಲಿ ಗಿರಿಜನ ಉಪ ಯೋಜನೆಯಡಿ ಕ್ರೋಢೀಕರಿಸಿದ ಹಣದಲ್ಲಿ ಸರ್ಕಾರದ ಆದೇಶ ಸಂಖ್ಯೆ ಸಕಇ 47 ಪವಯೋ 2005 ದಿನಾಂಕ:28-5-2005ರನ್ವಯ ಪರಿಶಿಷ್ಟ ವರ್ಗದ ನಿಲಯದ ವಿದ್ಯಾರ್ಥಿಗಳಿಗೆ ಭೋಜನಾ ವೆಚ್ಚ ಪರಿಷ್ಕರಣೆ ವೆಚ್ಚಕ್ಕಾಗಿ ಒದಗಿಸಿರುವ ರೂ.70.00ಲಕ್ಷಗಳಲ್ಲಿ ಉಂಟಾಗುವ ಉಳಿತಾಯದಲ್ಲಿ ಭರಿಸುವುದು ಮತ್ತು ಕೊರತೆಯಾಗುವ ರೂ.2,28,050-00ಗಳನ್ನು 2006-07ನೇ ಸಾಲಿಗೆ ಒದಗಿಸಲಾಗಿರುವ ಕ್ರೋಢೀಕೃತ ಅನುದಾನದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 823

**ಎಲ್.ಸುಶೀಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ-3,
ಸಮಾಜ ಕಲ್ಯಾಣ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಬಿ.ಬುಜಂಗಶೆಟ್ಟಿ, ಹೆಚ್‌ಸಿ-1073, ಹಿರಿಯಡ್ಕ ಪೊಲೀಸ್ ಠಾಣೆ, ಉಡುಪಿ ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರ ಆದೇಶ ಸಂಖ್ಯೆ:ಇವಿ/25/84-85, ದಿನಾಂಕ:03-05-1987.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ/ಮೇಲ್ಮನವಿ/10/87-88, ದಿನಾಂಕ:20-08-1987.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:03-04-2005.

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು,ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/113/2005, ದಿನಾಂಕ:03-11-2005

**ಪ್ರಸ್ತಾವನೆ:**

ಶ್ರೀ ಬಿ.ಬುಜಂಗಶೆಟ್ಟಿ, ಹೆಚ್‌ಸಿ-1073, ಹಿರಿಯಡ್ಕ ಪೊಲೀಸ್ ಠಾಣೆ, ಉಡುಪಿ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

``Gress misconduct and derelication of legitimate duties by consuming alcohol while you were on duty and created scene while some member of public were on hunger strike in front of SDPO`s Office, Udupi in connection with Kajeer assault case incident.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ, ಮಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:03-05-1987ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ, ಅರ್ಜಿದಾರರ ಸೇವೆಯನ್ನು ಪರಿಗಣಿಸಿ, ತಮ್ಮ ತಪ್ಪನ್ನು ತಿದ್ದಿಕೊಂಡು ಇಲಾಖೆಯಲ್ಲಿ ಮುಂದುವರೆಯಲು ಒಂದು ಅವಕಾಶ ನೀಡಲು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:20-08-1987ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಲ್ಲಿ ಪುನರ್ ನೇಮಕ ಮಾಡಿರುತ್ತಾರೆ ಮತ್ತು ಇವರ ವೇತನವನ್ನು ಪಿಸಿ ಹುದ್ದೆಯ ವೇತನ ಶ್ರೇಣಿಯ ಕನಿಷ್ಟ ವೇತನಕ್ಕೆ ಐದು ವರ್ಷಗಳ ಕಾಲ ಸಂಚಿತ ಪರಿಣಾಮ ಬೀರುವಂತೆ ಇಳಿಸಿರುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸದೇ ನೇರವಾಗಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಗೆ ಅರ್ಜಿ ಸಲ್ಲಿಸಿದ್ದು, ಮಾನ್ಯ ಆಡಳಿತ ನ್ಯಾಯ ಮಂಡಳಿಯು ಸಂಖ್ಯೆ:1301/1988ರ ದಿನಾಂಕ:30-06-1989ರ ಆದೇಶದಲ್ಲಿ ಅರ್ಜಿಯನ್ನು ವಜಾಗೊಳಿಸಿದೆ.

ಮಾನ್ಯ ಕೆ.ಎ.ಟಿ.ಯ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮಾನ್ಯ ಕೆ.ಎ.ಟಿ.ಯ ಆದೇಶದ ವಿರುದ್ಧ ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಲು ಅವಕಾಶವಿರುವುದಿಲ್ಲವೆಂದು ಪೊಲೀಸ್ ಅಧೀಕ್ಷಕರು, ಮಂಗಳೂರು ರವರು ದಿನಾಂಕ:29-07-2005ರ ತಮ್ಮ ಹಿಂಬರಹದಲ್ಲಿ ಅರ್ಜಿದಾರರಿಗೆ ತಿಳಿಸಿರುತ್ತಾರೆ. ಆದಾಗ್ಯೂ ಅರ್ಜಿದಾರರು ಸರ್ಕಾರಕ್ಕೆ ತಮ್ಮ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರಿಯ ಸೇವೆಯಿಂದ ವಜಾ ಮಾಡಿದ ಆದೇಶವನ್ನು ರದ್ದುಪಡಿಸಿ, ಮೇಲ್ಮನವಿ ಪ್ರಾಧಿಕಾರಿ ಅರ್ಜಿದಾರರನ್ನು ಮಾನವೀಯ ದೃಷ್ಟಿಯಿಂದ ಸೇವೆಯಲ್ಲಿ ಪುನರ್ ನೇಮಕ ಮಾಡಿದ್ದು, ಇದರ ವಿರುದ್ಧ ಸಲ್ಲಿಸಿದ ಅರ್ಜಿಯನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ವಜಾ ಮಾಡಿದ್ದರ ಹಿನ್ನೆಲೆಯಲ್ಲಿ ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಲು ಯಾವುದೇ ಅಂಶಗಳಿರುವುದಿಲ್ಲ. ಆದ್ದರಿಂದ, ಶಿಸ್ತು ಪ್ರಾಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳು ವಿಧಿಸಿರುವ ದಂಡನಾ ಆದೇಶಗಳಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 247 ಪೊಸಿಅ 2005 ಬೆಂಗಳೂರು ದಿನಾಂಕ:25ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಬುಜಂಗಶೆಟ್ಟಿ, ಹೆಚ್‌ಸಿ-1073, ಹಿರಿಯಡ್ಕ ಪೊಲೀಸ್ ಠಾಣೆ, ಉಡುಪಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:03-04-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 885

**ಸಿ. ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ,
(ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಹೆಚ್.ವೆಂಕಟೇಶ್, ಮಾಜಿ ಸಿಪಿಸಿ-206, ತೋರಣಗಲ್ಲು ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ ಇವರ ಆದೇಶ ಸಂಖ್ಯೆ:9/ಇವಿ/2004, ಜಿ.ಆ. ಸಂಖ್ಯೆ:453/2004-05, ದಿನಾಂಕ:03-02-2005.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ:19/ಅಪೀಲು/2005-06, ಓಬಿ ಸಂಖ್ಯೆ:113/2005-06, ದಿನಾಂಕ:08-08-2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:27-09-2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/130/2005, ದಿನಾಂಕ:06-03-2006.

**ಪ್ರಸ್ತಾವನೆ:**

ಶ್ರೀ ಹೆಚ್.ವೆಂಕಟೇಶ್, ಸಿಪಿಸಿ-206, ತೋರಣಗಲ್ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

``ದಿನಾಂಕ:03-03-2004ರಂದು ರಾತ್ರಿ ಸುಮಾರು 8-30 ಘಂಟೆಗೆ ನೀವು ಪಾನಮತ್ತರಾಗಿ, ಸಮವಸ್ತ್ರದಲ್ಲಿ ಕಮಲಾಪುರ ಪೋಲೀಸ್ ಠಾಣೆಯ ಮುಂದಿನ ರಸ್ತೆಯಲ್ಲಿ ನಿಂತು, ಆ ದಿನದ ಹೊಸಪೇಟೆಯಲ್ಲಿ ನಡೆದ ಜನತಾದಳ ಸಭೆಯ ನಂತರ ಕಂಪ್ಲಿ ಕಡೆಗೆ ಹೋಗುತ್ತಿದ್ದ ಕಾರ್ಯಕರ್ತರಿರುವ ಲಾರಿಯನ್ನು ನೀವು ಅನಾವಶ್ಯಕವಾಗಿ ತಡೆದು, ಅನಧಿಕೃತವಾಗಿ ನಿಲ್ಲಿಸಿ, ರೂ.100/- ಕೊಡಲು ಕೇಳಿದ್ದು, ನಂತರ ಲಾಠಿ ಹಿಡಿದು ಲಾರಿಯಲ್ಲಿದ್ದ ಕಾರ್ಯಕರ್ತರ ಮೇಲೆ ರೇಗಾಡಿ, ಕೂಗಾಡಿ, ಎಳೆದಾಡಿ, ಅವರೊಂದಿಗೆ ಅನುಚಿತವಾಗಿ ವರ್ತಿಸಿರುತ್ತೀರಿ. ಇದಲ್ಲದೇ, ಅಲ್ಲಿಗೆ ಬಂದ ಸಿಪಿಐ ಹೊಸಪೇಟೆ ಗ್ರಾಮೀಣ ವೃತ್ತ, ಕಂಪ್ಲಿರವರೊಂದಿಗೆ ಅನುಚಿತವಾಗಿ ಅಗೌರವದಿಂದ ವರ್ತಿಸಿದ್ದು, ನೀವು ಪಾನಮತ್ತರಾಗಿ ಈ ರೀತಿ ವರ್ತಿಸಿದ್ದ ಬಗ್ಗೆ ನಿಮ್ಮನ್ನು ಮೆಡಿಕಲ್ ಮಾಡಿಸಲು ಕರೆದೊಯ್ದ ಸಿಹೆಚ್‌ಸಿ-132 ಬಾಬುರಾವು ಮತ್ತು ಸಿಪಿಸಿ-806 ತಿಪ್ಪೇಸ್ವಾಮಿರವರೊಂದಿಗೂ ಸಹ ಅನುಚಿತವಾಗಿ ವರ್ತಿಸಿ, ನಂತರ ನಿಮ್ಮನ್ನು ಪರೀಕ್ಷಿಸಿದ ಕಮಲಾಪುರದ ವೈದ್ಯಾಧಿಕಾರಿಗಳ ಮುಂದೆ ಸಹ ನಿಮ್ಮ ಅನುಚಿತ ವರ್ತನೆಯನ್ನು ತೋರಿಸಿ, ನಿಮ್ಮ ಅತೀವ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:03-02-2005ರ ಆದೇಶದಲ್ಲಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಿ, ಇವರು 15 ವರ್ಷ ಸೇವೆ ಪೂರ್ಣಗೊಳಿಸಿಲ್ಲದ ಕಾರಣ, ವಿಶ್ರಾಂತಿ ವೇತನಕ್ಕೆ ಅರ್ಹರಿರುವುದಿಲ್ಲ, ಕಡ್ಡಾಯ ನಿವೃತ್ತಿ ಉಪದಾನ ಮಾತ್ರ ಪಡೆಯಬಹುದೆಂಬ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪೂರ್ವ ವಲಯ, ದಾವಣಗೆರೆ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:08-08-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಮ್ಮ ಮೇಲಿನ ಆರೋಪಗಳನ್ನು ಒಪ್ಪಿಕೊಂಡು ಇಲಾಖಾ ವಿಚಾರಣೆಯನ್ನು ನಡೆಸದಂತಿರಲು ಇಲಾಖಾ ವಿಚಾರಣೆ ಅಧಿಕಾರಿಗಳನ್ನು ಲಿಖಿತ ಮೂಲಕ ಕೋರಿರುತ್ತಾರೆ. ಅಲ್ಲದೆ, ಅರ್ಜಿದಾರರು ನ್ಯಾಯಾಲಯದಲ್ಲೂ ಸಹ ತಪ್ಪಿತಸ್ಥರೆಂದು ಸಾಬೀತಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇಲಾಖಾ ವಿಚಾರಣೆಯಿಂದಲೂ ಸಾಕ್ಷ್ಯಾಧಾರಗಳಿಂದಲೂ ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 156 ಪೊಸಿಅ 2006 ಬೆಂಗಳೂರು ದಿನಾಂಕ:26ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ವೆಂಕಟೇಶ್, ಸಿಪಿಸಿ-206 ತೋರಣಗಲ್ಲು ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:27-09-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ,

(ಪೊಲೀಸ್ ಸೇವೆಗಳು)

ಪಿ.ಆರ್. 887

**ಸಿಬ್ಬಂದಿ ಮತ್ತು ಆಡಳಿತ ಸುಧಾರಣ ಸಚಿವಾಲಯ**

**ವಿಷಯ :** ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಆಪ್ತ ಶಾಖೆಯಲ್ಲಿನ ಒಂದು ಗ್ರೂಪ್ ^ಸಿ^ ಹುದ್ದೆಯನ್ನು ಗ್ರೂಪ್ ^ಎ^ ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** ಟಿಪ್ಪಣಿ ಸಂಖ್ಯೆ: 3/2006, ದಿನಾಂಕ: 17.2.2006.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 78 ಸಅಸೇ 2006, ಬೆಂಗಳೂರು, ದಿನಾಂಕ 1ನೇ ಜೂನ್ 2006.**

ಮೇಲೆ ಓದಲಾದ ದಿನಾಂಕ: 17.2.2006ರ ಟಿಪ್ಪಣಿಯಲ್ಲಿ ಶ್ರೀ ಎಸ್.ಕೆ.ಚನ್ನಬಸಪ್ಪ, ಹಿರಿಯ ಸಹಾಯಕ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರನ್ನು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಆಪ್ತ ಶಾಖೆಗೆ ನೇಮಿಸುವಂತೆ ಕೋರಲಾಗಿದೆ. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಆಪ್ತ ಶಾಖೆಯಲ್ಲಿ ಸದರಿ ಅಧಿಕಾರಿಯವರನ್ನು ನೇಮಿಸಲು ಗ್ರೂಪ್ ^ಎ^ ಹುದ್ದೆ ಖಾಲಿ ಇಲ್ಲದಿರುವುದರಿಂದ ಅಧಿಕಾರಿಯವರು ಆಪ್ತ ಶಾಖೆಯಲ್ಲಿ ಕಾರ್ಯವರದಿ ಮಾಡಿಕೊಂಡಿರುವ ದಿನಾಂಕ: 17.2.2006 ರಿಂದ ಜಾರಿಗೆ ಬರುವಂತೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸಚಿವರ ಆಪ್ತ ಶಾಖೆಯಲ್ಲಿ ಮಂಜೂರಾಗಿ ಖಾಲಿ ಇರುವ ಒಂದು ಗ್ರೂಪ್ ^ಸಿ^ ಹುದ್ದೆಯನ್ನು ಗ್ರೂಪ್ ^ಎ^ ಹುದ್ದೆಗೆ ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 883 ವೆಚ್ಚ-5/2006, ದಿನಾಂಕ: 22.5.2006 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

ಪಿ.ಆರ್. 861

**ವಿಷಯ :** ಶ್ರೀ ಎ.ಕೆ.ಪಟ್ಟೇಗಾರ್, ಆಪ್ತ ಕಾರ್ಯದರ್ಶಿ ಗ್ರೇಡ್-2, ಮುಖ್ಯ ಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿ ಇವರ ವಿದೇಶ ಪ್ರವಾಸದ ಬಗ್ಗೆ.

**ಓದಲಾಗಿದೆ :** 1. ಟಿಪ್ಪಣಿ ಸಂಖ್ಯೆ: ಸಿಎಂ 23/ಒಎಸ್‌ಸ/2005, ದಿನಾಂಕ: 12.12.2005.

2 ಟಿಪ್ಪಣಿ ದಿನಾಂಕ: 3.3.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಟಿಪ್ಪಣಿ ದಿನಾಂಕ: 12.12.2005 ರಲ್ಲಿ ಶ್ರೀ ಎ.ಕೆ.ಪಟ್ವೇಗಾರ್, ಆಪ್ತ ಕಾರ್ಯದರ್ಶಿ ಗ್ರೇಡ್–2, ಮುಖ್ಯ ಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿ ಇವರು ದಿನಾಂಕ: 25.12.2005 ರಿಂದ ದಿನಾಂಕ: 8.2.2006 ರವರೆಗಿನ 45 ದಿನಗಳ ಪರಿವರ್ತಿತ ರಜೆ ಅವಧಿಯಲ್ಲಿ ಹಜ್ ಪ್ರವಾಸ ಕೈಗೊಳ್ಳಲು ಸೌದಿ ಅರೇಬಿಯಾಗೆ ಹೋಗಿಬರಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಟಿಪ್ಪಣಿ ದಿನಾಂಕ: 3.3.2006ರಲ್ಲಿ ಕರ್ನಾಟಕ ರಾಜ್ಯ ಹಜ್ ಸಮಿತಿ ಅಧಿಕಾರಿಯವರನ್ನು ಹಜ್–2006ಗೆ ಆಯ್ಕೆ ಮಾಡಿರುವುದರಿಂದ ದಿನಾಂಕ: 25.12.2005 ರಿಂದ 8.2.2006 ರವರೆಗೆ 45 ದಿನಗಳ ಪರಿವರ್ತಿತ ರಜೆಯನ್ನು ಮಂಜೂರು ಮಾಡಿ, ಹಜ್ ಪ್ರವಾಸ ಕೈಗೊಳ್ಳಲು ಅನುಮತಿ ನೀಡಬೇಕೆಂದು ಉಲ್ಲೇಖ ಕ್ರಮ ಸಂಖ್ಯೆ (1) ರ ದಿನಾಂಕ: 12.12.2005ರ ಟಿಪ್ಪಣಿಯಲ್ಲಿ ಕೋರಿರುವುದೇ ಹೊರತು, ಅಧಿಕಾರಿಯವರು ಈಗಾಗಲೇ ಕೈಗೊಂಡಿರುವ ಹಜ್ ಪ್ರವಾಸಕ್ಕೆ ಸರ್ಕಾರದ ಪೂರ್ವಾನುಮತಿಯನ್ನು ಪಡೆದಿರುವುದಿಲ್ಲ. ಆದುದರಿಂದ ಈ ಪ್ರವಾಸವನ್ನು ಮೇಲಾಧಿಕಾರಿಗಳ ಪೂರ್ವಾನುಮತಿ ಪಡೆಯದೆ ಕೈಗೊಂಡಿರುವ ಬಗ್ಗೆ ಕ್ಷಮಿಸುವಂತೆ ಕೋರುತ್ತಾ, ಈ ರೀತಿಯ ಘಟನೆ ಮರುಕಳಿಸದಂತೆ ನೋಡಿಕೊಳ್ಳುವುದಾಗಿ ತಿಳಿಸಿರುತ್ತಾರೆ. ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 470 ಸಅಸೇ 2006, ಬೆಂಗಳೂರು, ದಿನಾಂಕ 5ನೇ ಜೂನ್ 2006.**

ಶ್ರೀ ಎ.ಕೆ.ಪಟ್ವೇಗಾರ್, ಆಪ್ತ ಕಾರ್ಯದರ್ಶಿ ಗ್ರೇಡ್–2, ಮುಖ್ಯ ಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿ ಅವರಿಗೆ ದಿನಾಂಕ: 26.12.2005 ರಿಂದ ದಿನಾಂಕ: 8.2.2006 ರವರೆಗೆ 45 ದಿನಗಳ ಪರಿವರ್ತಿತ ರಜೆಯನ್ನು ಮಂಜೂರು ಮಾಡಲಾಗಿದೆ. ಸದರಿ ಅವಧಿಯಲ್ಲಿ ಅಧಿಕಾರಿಯವರು ಕೈಗೊಂಡಿರುವ ಹಜ್ ಪ್ರವಾಸಕ್ಕೆ ಘಟನೋತ್ತರ ಮಂಜೂರಾತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು-2).

ಪಿ.ಆರ್. 882

**ವಿಷಯ :** ಆರ್ಥಿಕ ಇಲಾಖೆಯ ಆರ್ಥಿಕ ಆಯೋಗ ಕೋಶದಲ್ಲಿನ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** ಅ.ಟಿ.ಸಂಖ್ಯೆ: ಆಇ 85 ಆಆಕೋ 2002 (ಪಿ–1) ದಿನಾಂಕ: 21.4.2006.

**ಪ್ರಸ್ತಾವನೆ:**

ಮೇಲೆ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 63 ಸಸಿವಿ 2004, ದಿನಾಂಕ: 17.11.2004 ರಲ್ಲಿ ಮುಂದುವರಿಸಲಾದ ಆರ್ಥಿಕ ಆಯೋಗ ಕೋಶದ ಹುದ್ದೆಗಳ ಕಾಲಾವಧಿಯು ದಿನಾಂಕ: 5.8.2005 ರಂದು ಕೊನೆಗೊಂಡಿರುವುದರಿಂದ ಆ ಹುದ್ದೆಗಳ ಅವಧಿಯನ್ನು ಮುಂದುವರಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 81 ಸಸಿವಿ 2005, ಬೆಂಗಳೂರು, ದಿನಾಂಕ 20ನೇ ಮೇ 2006.**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಆರ್ಥಿಕ ಆಯೋಗ ಕೋಶದಲ್ಲಿನ ಹುದ್ದೆಗಳನ್ನು ದಿನಾಂಕ: 6.8.2005 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

| | | |
|---|---|---|
| 1. | ಉಪ ಕಾರ್ಯದರ್ಶಿ | 1 ಹುದ್ದೆ |
| 2. | ಶಾಖಾಧಿಕಾರಿ | 2 ಹುದ್ದೆಗಳು |
| 3. | ಶೀಘ್ರಲಿಪಿಗಾರ | 1 ಹುದ್ದೆ |
| 4. | ಬೆರಳಚ್ಚುಗಾರ | 1 ಹುದ್ದೆ |
| 5. | ಸಹಾಯಕರು | 2 ಹುದ್ದೆಗಳು |
| 6. | ಕಿರಿಯ ಸಹಾಯಕ | 1 ಹುದ್ದೆ |
| 7. | ದಲಾಯತ್ | 1 ಹುದ್ದೆ |
| 8. | ಚಾಲಕ | 1 ಹುದ್ದೆ |
| | ಒಟ್ಟು | 10 ಹುದ್ದೆಗಳು |

ಈ ಆದೇಶವನ್ನು ದಿನಾಂಕಃ 10.7.1996ರ ಆದೇಶ ಸಂಖ್ಯೆಃ ಎಫ್‌ಡಿ 1 ಟಿಎಫ್‌ಪಿ 96 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು-2).

ಪಿ.ಆರ್. 862

**ವಿಷಯ :** ಕಂದಾಯ ಇಲಾಖೆಯ ವಿಶೇಷ ಕೋಶದ ತಾತ್ಕಾಲಿಕ ಹುದ್ದೆಗಳ ಮುಂದುವರಿಕೆ ಬಗ್ಗೆ.

**ಓದಲಾಗಿದೆ :**
1. ದಿನಾಂಕಃ 31.1.86ರ ಸಂಖ್ಯೆಃಸಿಆಸುಇ 279 ಎಸ್‌ಜಿಒ 85ರ ಸರ್ಕಾರಿ ಆದೇಶ.
2. ದಿನಾಂಕಃ 8.11.2002 ಸಂಖ್ಯೆಃಸಿಆಸುಇ 25 ಸಸಿವಿ 97ರ ಸರ್ಕಾರಿ ಆದೇಶ.
3. ಕಂದಾಯ ಇಲಾಖೆಯ ಕಡತ ಸಂಖ್ಯೆ: ಕಂಇ 32 ವಿಕೋಆ 98.
4. ಅಧಿಸೂಚನೆ ಸಂಖ್ಯೆಃ ಸಿಆಸುಇ 234 ಆಸೇವ 2002, ದಿನಾಂಕಃ 27.2.2003.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಸಸಿವಿ 2003, ದಿ: 8.4.2003.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 95 ಸಸಿವಿ 2003, ದಿನಾಂಕ: 5.1.2004.
7. ಕಂದಾಯ ಇಲಾಖೆಯ ಕಡತ ಸಂಖ್ಯೆಃ ಕಂಇ 32 ವಿಕೋಆ 2005.

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕಂದಾಯ ಇಲಾಖೆಯ ಆಡಳಿತಾತ್ಮಕ ನಿಯಂತ್ರಣದಲ್ಲಿರುವ ಕಂದಾಯ ಇಲಾಖೆ, ಭೂಮಾಪನ, ಭೂದಾಖಲಾತಿ, ಮುದ್ರಾಂಕ, ನೋಂದಣಿ ಮತ್ತು ಮುಜರಾಯಿ ಇಲಾಖೆಗಳಿಗೆ ಸಂಬಂಧಿಸಿದ ಆರೋಪಣೆ ಃ ದೂರು ಃ ಅವ್ಯವಹಾರ ಇತ್ಯಾದಿಗಳನ್ನು ಅನಿರೀಕ್ಷಿತ ತಪಾಸಣೆಗಳಿಂದ ಪತ್ತೆ ಹಚ್ಚಿ ಶಿಸ್ತಿನ ಕ್ರಮವನ್ನು ತೆಗೆದುಕೊಳ್ಳುವ ಸಲುವಾಗಿ ಹಾಗೂ ಈ ಬಗ್ಗೆ ಆಡಳಿತಾತ್ಮಕ ಸುಧಾರಣೆ ನೀಡಲು ಕೆಳಕಂಡ ಹುದ್ದೆಗಳನ್ನು ಒಳಗೊಂಡಂತೆ ^ವಿಶೇಷ ಕೋಶ^ ಒಂದನ್ನು ಸೃಜಿಸಲಾಗಿರುತ್ತದೆ.

| | | |
|---|---|---|
| 1. | ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ | 1 |
| 2. | ಅಧೀನ ಕಾರ್ಯದರ್ಶಿ (ವಿಶೇಷಕೋಶ) | 1 |
| 3. | ಹಿರಿಯ ಸಹಾಯಕ | 1 |
| 4. | ಸಹಾಯಕ | 1 |
| 5. | ಕಿರಿಯ ಸಹಾಯಕ | 1 |
| 6. | ಬೆರಳಚ್ಚುಗಾರ | 1 |
| 7. | ದಲಾಯತ್ | 1 |
| 8. | ಚಾಲಕ | 1 |

ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಉಪ ಕಾರ್ಯದರ್ಶಿ (ವಿಶೇಷ ಕೋಶ) ಕಂದಾಯ ಇಲಾಖೆ ಹಾಗೂ ಈ ಹುದ್ದೆಗೆ ಹೊಂದಿಕೊಂಡಿರುವ ಒಂದು ಶೀಘ್ರಲಿಪಿಗಾರ, ಒಂದು ಕಿರಿಯ ಸಹಾಯಕ ಹಾಗೂ ಒಂದು ದಲಾಯತ್ ಹುದ್ದೆಗಳನ್ನು ದಿನಾಂಕಃ 31.3.2003 ರಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ. ಉಪ ಕಾರ್ಯದರ್ಶಿ (ವಿಶೇಷ ಕೋಶ) ಕಂದಾಯ ಇಲಾಖೆ ಇವರ ಕೆಲಸವನ್ನು ಉಪ ಕಾರ್ಯದರ್ಶಿ (ಮುಜರಾಯಿ ಮತ್ತು ನೋಂದಣಿ), ಕಂದಾಯ ಇಲಾಖೆ ಇವರಿಗೆ ಮರುಹಂಚಿಕೆ ಮಾಡಲಾಗಿದೆ.

ಕ್ರಮ ಸಂಖ್ಯೆ (3) ರಲ್ಲಿ ಓದಲಾಗಿರುವ ಕಡತದಲ್ಲಿ ಕಂದಾಯ ಇಲಾಖೆಯ ಪ್ರಸ್ತಾವನೆಯನ್ನು ಕಳುಹಿಸಿ, ಉಪ ಕಾರ್ಯದರ್ಶಿ (ವಿಶೇಷ ಕೋಶ) ಹುದ್ದೆಯನ್ನು ರದ್ದುಗೊಳಿಸುವ ಬದಲು ಶ್ರೀ ಸಿದ್ದರಾಮಯ್ಯ, ನಿವೃತ್ತ ಉಪ ಕಾರ್ಯದರ್ಶಿ ಇವರು ಹೊಂದಿದ್ದ ಹುದ್ದೆಯನ್ನು ರದ್ದುಗೊಳಿಸಿ, ಕೆಳಕಂಡ ಹುದ್ದೆಗಳನ್ನು ಖಾಯಂ ಆಗಿ ಮುಂದುವರೆಸಲು ಕೋರಿರುತ್ತಾರೆ.

| | | |
|---|---|---|
| 1. | ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ | 1 |
| 2. | ಅಧೀನ ಕಾರ್ಯದರ್ಶಿ (ವಿಶೇಷಕೋಶ) | 1 |
| 3. | ಹಿರಿಯ ಸಹಾಯಕ | 1 |
| 4. | ಸಹಾಯಕ | 1 |
| 5. | ಕಿರಿಯ ಸಹಾಯಕ | 1 |
| 6. | ಬೆರಳಚ್ಚುಗಾರ | 1 |
| 7. | ದಲಾಯತ್ | 1 |
| 8. | ಚಾಲಕ | 1 |

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾಗಿರುವ ಅಧಿಸೂಚನೆಯಲ್ಲಿ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ವಿಶೇಷ ಕೋಶ) ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್.ಶಂಕರನಾರಾಯಣ ಇವರನ್ನು ಉಪ ಕಾರ್ಯದರ್ಶಿ ಕಂದಾಯ ಇಲಾಖೆ (ಮುಜರಾಯಿ ಮತ್ತು ನೋಂದಣಿ) ಹುದ್ದೆಗೆ ನೇಮಿಸಲಾಗಿದೆ. ಹಾಗೂ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿನಾಂಕ: 8.4.2003ರ ಸರ್ಕಾರದ ಆದೇಶದಲ್ಲಿ ಉಳಿದ ಹುದ್ದೆಗಳನ್ನು ದಿನಾಂಕ: 31.12.2003 ರವರೆಗೆ ವಿಸ್ತರಿಸಲಾಗಿರುತ್ತದೆ.

ಮೇಲ್ಕಂಡ ಹುದ್ದೆಗಳನ್ನು ಕಾಲಾನುಕಾಲಕ್ಕೆ ಮುಂದುವರೆಸುತ್ತಾ, ಕ್ರಮ ಸಂಖ್ಯೆ (6)ರ ಸರ್ಕಾರದ ಆದೇಶದಲ್ಲಿ ದಿನಾಂಕಃ 30.12.2004 ರವರೆಗೆ ಮುಂದುವರೆಸಲಾಗಿದೆ.

ಪ್ರಸ್ತುತ ಈ ಹುದ್ದೆಗಳನ್ನು ದಿನಾಂಕ: 1.1.2005 ರಿಂದ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 96 ಸಸಿವಿ 2005, ಬೆಂಗಳೂರು, ದಿನಾಂಕ 20ನೇ ಮೇ 2006.**

ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆ (ವಿಶೇಷ ಕೋಶ)ದ ಕೆಳಕಂಡ ಹುದ್ದೆಗಳನ್ನು ದಿನಾಂಕಃ 1.1.2005 ರಿಂದ ದಿನಾಂಕಃ 31.12.2006 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| 1. | ಅಧೀನ ಕಾರ್ಯದರ್ಶಿ (ವಿಶೇಷ ಕೋಶ) | 1 |
| 2. | ಹಿರಿಯ ಸಹಾಯಕ | 1 |
| 3. | ಸಹಾಯಕ | 1 |
| 4. | ಕಿರಿಯ ಸಹಾಯಕ | 1 |
| 5. | ಬೆರಳಚ್ಚುಗಾರ | 1 |
| 6. | ದಲಾಯತ್ | 1 |
| 7. | ಚಾಲಕ | 1 |

ಸದರಿ ಸರ್ಕಾರದ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆಃ ಆಇ 1 ಟಿಎಫ್‌ಪಿ 96, ದಿನಾಂಕಃ 10.7.96 ರನ್ವಯ ನೀಡಿರುವ ಸಹಮತಿ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 830

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು-2).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ಶ್ರೀ ರವಿಸೂರನ್, ಸಹಾಯಕ ಇಂಜಿನಿಯರ್, ಅಧೀಕ್ಷಕ ಅಭಿಯಂತರವರ ಕಛೇರಿ, ಪಂ.ರಾ.ಇಂ. ವೃತ್ತ, ಗುಲ್ಬರ್ಗಾ ಇವರ ಅಮಾನತ್ತನ್ನು ತೆರವುಗೊಳಿಸಿ, ಸೇವೆಯಲ್ಲಿ ಪುನರ್ ಸ್ಥಾಪಿಸುವ ಬಗ್ಗೆ- ಆದೇಶ.

**ಓದಲಾಗಿದೆ:**
1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ಮುಖ್ಯ ಅಭಿಯಂತರರು, ಪಂರಾಇಂ ಇಲಾಖೆ, ಬೆಂಗಳೂರು ಇವರಿಗೆ ಬರೆದು ಸರ್ಕಾರಕ್ಕೆ ಕಳುಹಿಸಿದ ಪತ್ರದ ಸಂಖ್ಯೆ.ಜಿಪಗು:ಆಡಳಿತ:ವಿಚಾರಣೆ:48:91-92, ದಿ. 20-12-2005.
2) ಮುಖ್ಯ ಇಂಜಿನಿಯರ್, ಪಂ.ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪತ್ರ ಸಂ. ಮುಇಂ:ಪಂರಾಇಂಇ:ಬೆಂ:ಸಿ-7:ಸಇಂ:ಅವ್ಯವಹಾರ:2005-06:5972 ದಿ. 30-12-2005.
3) ಸರ್ಕಾರದ ಆದೇಶ ಸಂಖ್ಯೆ. ಗ್ರಾಅಪ : 01: ಇಎನ್‌ಕ್ಯೂ : 06, ದಿ. 7-1-2006.
4) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಅ.ಸ. ಪತ್ರ ಸಂಖ್ಯೆ. ಜಿಪಗು: ಆಡಳಿತ: ವಿಚಾರಣೆ : 48:2005-06, ದಿ. 7-3-2006.

ಪ್ರಸ್ತಾವನೆ:

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 20.12.2005ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ಹಾಗೂ ಮೇಲೆ ಓದಲಾದ ಕ್ರಮ ಸಂಖ್ಯೆ:(2)ರ ದಿನಾಂಕ: 30.12.2005ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಪಂಚಾಯತ್‌ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಶ್ರೀ ರವಿಸೂರನ್, ಸಹಾಯಕ ಇಂಜಿನಿಯರ್, ಹಾಲಿ ಅಧೀಕ್ಷಕ ಅಭಿಯಂತರರ ಕಛೇರಿ, ಪಂ.ರಾ.ಇಂ. ವೃತ್ತ, ಗುಲ್ಬರ್ಗಾ ಇವರು ಈ ಹಿಂದೆ ತಾಲ್ಲೂಕು ಪಂಚಾಯತ್, ಆಳಂದ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ 2001-02ನೇ ಸಾಲಿನ ಆಶ್ರಯ ಯೋಜನೆಯಡಿ ಗದಲೇಗಾಂವ್ ಗ್ರಾಮದಲ್ಲಿ ಮನೆಗಳ ನಿರ್ಮಾಣ ಕಾಮಗಾರಿಯನ್ನು ವಹಿಸಿಕೊಂಡಿದ್ದು ಸದರಿಯವರು ಯಾವುದೇ ಮನೆಗಳನ್ನು ಪೂರ್ಣಗೊಳಿಸದೇ ಅವ್ಯವಹಾರವೆಸಗಿದ್ದಾರೆಂದು ಮತ್ತು ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿರುವುದು ತನಿಖೆ ಮೂಲಕ ಮೇಲ್ನೋಟಕ್ಕೆ ಸಾಬೀತಾಗಿರುವ ಹಿನ್ನೆಲೆಯಲ್ಲಿ ಅವರನ್ನು ಕೂಡಲೇ ಅಮಾನತ್ತಿನಲ್ಲಿಡಲು ಶಿಫಾರಸ್ಸು ಮಾಡಿದ್ದರು.

ಸರ್ಕಾರವು ಮುಖ್ಯ ಇಂಜಿನಿಯರ್, ಪಂ.ರಾ.ಇಂ. ಇಲಾಖೆ, ಬೆಂಗಳೂರು ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರುಗಳ ವರದಿಯನ್ನು ಪರಿಶೀಲಿಸಲಾಗಿ ಶ್ರೀ ರವಿಸೂರನ್, ಸಹಾಯಕ ಇಂಜಿನಿಯರ್, ಇವರು ಸರ್ಕಾರಿ ಹಣ ದುರುಪಯೋಗಪಡಿಸಿಕೊಂಡಿರುವುದು ಹಾಗೂ ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ತೀವ್ರ ಲೋಪ ಮತ್ತು ದುರ್ನಡತೆ ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ ಇಲಾಖಾ ವಿಚಾರಣೆ ಬಾಕಿ ಇಟ್ಟು ಶ್ರೀ ರವಿಸೂರನ್, ಸಹಾಯಕ ಇಂಜಿನಿಯರ್, ಅಧೀಕ್ಷಕ ಅಭಿಯಂತರವರ ಕಛೇರಿ, ಪಂ.ರಾ.ಇಂ. ವೃತ್ತ, ಗುಲ್ಬರ್ಗಾ ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರಿ ಆದೇಶದಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿತ್ತು.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ತಮ್ಮ ಅ.ಸ. ಪತ್ರದಲ್ಲಿ ಶ್ರೀ ರವಿಸೂರನ್, ಸಹಾಯಕ ಇಂಜಿನಿಯರ್ ಇವರ ವಿರುದ್ಧ ಇಲಾಖಾ ವಿಚಾರಣೆ ಹೂಡಲು ದಿನಾಂಕ: 16.01.2006ರಂದು ಕಾರಣ ಕೇಳುವ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿ ಅನುಬಂಧ-1 ರಿಂದ 4 ರವರೆಗೆ ಜಾರಿ ಮಾಡಲಾಗಿದೆ ಎಂದು ತಿಳಿಸಿರುತ್ತಾರೆ. ಮತ್ತು ಇವರು ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿರುವುದರಿಂದ ಮೇಲಿನ ಆಪಾದನೆಗಳ ಬಗ್ಗೆ ವಿವರವಾದ ವಿಚಾರಣೆ ಅಗತ್ಯವಿಲ್ಲವೆಂದು ತಿಳಿಸಲಾಗಿದೆ. ಶ್ರೀ ರವಿಸೂರನ್, ಸಹಾಯಕ ಇಂಜಿನಿಯರ್ ಇವರು ದಿನಾಂಕ: 13.03.2006ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ, ಸದರಿ ಮನೆಗಳು ತೆಗೆದುಕೊಂಡ ಹಣಕ್ಕೆ ತಕ್ಕಂತೆ ಕಾಮಗಾರಿ ಮುಗಿದಿದ್ದು, ವಿನಾಕಾರಣ ನನ್ನ ಮೇಲೆ ಆರೋಪಿಸಿ ಸೇವೆಯಿಂದ ಅಮಾನತ್ತುಗೊಳಿಸಿರುವುದನ್ನು ರದ್ದುಪಡಿಸಿ, ಸೇವೆಯಲ್ಲಿ ಪುನರ್ ನೇಮಕ ಮಾಡಬೇಕೆಂದು ಕೋರಿರುತ್ತಾರೆ.

ಸರ್ಕಾರವು ಶ್ರೀ ರವಿಸೂರನ್ ಇವರ ಮನವಿಯನ್ನು ಪರಿಶೀಲಿಸಿ, ಇವರ ವಿರುದ್ಧ ಈಗಾಗಲೇ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿರುವುದರಿಂದ, ಇವರ ಅಮಾನತ್ತನ್ನು ತೆರವುಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

### ಆದೇಶ ಸಂಖ್ಯೆ: ಗ್ರಾಅಪ 01 ಇಎನ್‌ಕ್ಯೂ 06, ಬೆಂಗಳೂರು, ದಿನಾಂಕ:1ನೇ ಏಪ್ರಿಲ್, 2006

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(5)(ಸಿ) ಪ್ರಕಾರ ಶ್ರೀ ರವಿಸೂರನ್, ಸಹಾಯಕ ಇಂಜಿನಿಯರ್, ಇವರ ಮೇಲೆ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು, ಇವರ ಅಮಾನತ್ತನ್ನು ತೆರವುಗೊಳಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪಂಚಾಯತ್‌ರಾಜ್ ಇಂಜಿನಿಯರಿಂಗ್ ಇಲಾಖೆಯ ನಂ.1 ಯಾಂತ್ರಿಕ ಉಪ ವಿಭಾಗ, ಬೆಂಗಳೂರು ಇಲ್ಲಿನ ಖಾಲಿ ಇರುವ ಹುದ್ದೆಗೆ ನೇಮಕ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್.550

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ವಿಷಯ:** ಶ್ರೀ ಎಸ್.ಕೆ.ಬಿರಾದಾರ್, ಅಂದಿನ ಉಗ್ರಾಣ ಅಧೀಕ್ಷಕರು (ನಿವೃತ್ತ), ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಚಿತ್ರದುರ್ಗ ಇವರ ಮೇಲಿನ ಆರೋಪಗಳ ಬಗ್ಗೆ ವಿವರವಾದ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಿಸುವ ಬಗ್ಗೆ - ಆದೇಶ.

**ಓದಲಾಗಿದೆ:** 1) ಮುಖ್ಯಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಚಿತ್ರದುರ್ಗ ಇವರ ಪತ್ರ ಸಂ:ಜಿಪಂಚಿ/7ಸಿ/ಸಿಆರ್/75/04-05 / ದಿ.16-11-2004.

2) ಮುಖ್ಯ ಇಂಜಿನಿಯರ್, ಪಂ.ರಾ.ಇಂ. ಇಲಾಖೆ, ಬೆಂಗಳೂರು ಇವರ ಪತ್ರ ಸಂ. ಸಿ-7:ವಿಚಾರಣೆ/04-05, ದಿ:17-1-05.

3) ಕಾರಣ ಕೇಳುವ ನೋಟೀಸ್ ಜಾರಿ ಮಾಡಿದ ಸಂಖ್ಯೆ. ಗ್ರಾಅಪ:87:ಜಿಪಅ:04, ದಿ.24-1-05.

4) ಆಪಾದಿತ ನೌಕರರು ಸಲ್ಲಿಸಿದ ಲಿಖಿತ ಉತ್ತರಗಳದಿ. 25-02-05.

**ಪ್ರಸ್ತಾವನೆ:**

ಶ್ರೀ ಎಸ್.ಕೆ.ಬಿರಾದಾರ, ಅಂದಿನ ಉಗ್ರಾಣ ಅಧೀಕ್ಷಕರು , ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ , ಚಿತ್ರದುರ್ಗ ಇವರು ದಿ: 26-6-98 ರಿಂದ 31-1-2001 ರವರೆಗೆ ಉಗ್ರಾಣ ಅಧೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಉಗ್ರಾಣ ಸಾಮಗ್ರಿಗಳ ಕೊರತೆಗೆ ಸಂಬಂಧಿಸಿದಂತೆ ಮುಖ್ಯಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಚಿತ್ರದುರ್ಗ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ವರದಿ ಸಲ್ಲಿಸಿ, ಸದರಿ ನೌಕರರ ಮೇಲೆ ಶೀಘ್ರದಲ್ಲಿಯೇ ದಾಖಲಾತಿಗಳೊಂದಿಗೆ ಆರೋಪ ಪಟ್ಟಿ ತಯಾರಿಸಿ ಸಲ್ಲಿಸಲಾಗುವುದೆಂದು ತಿಳಿಸಿದ್ದರು. ಈ ಬಗ್ಗೆ ಪುನ: ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಶ್ರೀ ಎಸ್.ಕೆ.ಬಿರಾದಾರ, ಅಂದಿನ ಉಗ್ರಾಣ ಅಧೀಕ್ಷಕರು , ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ , ಚಿತ್ರದುರ್ಗ ಇವರ ಮೇಲಿನ ಆರೋಪಗಳ ಬಗ್ಗೆ ಇವರ ವಿರುದ್ಧ ಕೆ.ಸಿ.ಎಸ್. ನಿಯಮ 214 ರಡಿಯಲ್ಲಿ ಕ್ರಮ ಕೈಗೊಳ್ಳಲು ಕರಡು ದೋಷಾರೋಪಣಾ ಪಟ್ಟಿ ಅನುಬಂಧ-4 ನ್ನು ದಾಖಲೆಗಳ ಪ್ರತಿಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಅವರ ಮೇಲೆ ಶಿಸ್ತು ಕ್ರಮ ಕೈಗೊಳ್ಳಲು ಕೆ.ಸಿ.ಎಸ್.ಆರ್. ನ ನಿಯಮ 214 ರಂತೆ ಇವರ ಮೇಲೆ ಇಲಾಖಾ ವಿಚಾರಣೆ ಹೂಡಿ ಮೇಲೆ ಓದಲಾದ ಕ್ರಮ ಸಂ. (3) ರ ದಿ. 24-1-05 ರಲ್ಲಿ ಕಾರಣ ಕೇಳುವ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿಮಾಡಲಾಗಿತ್ತು.

ಶ್ರೀ ಎಸ್.ಕೆ.ಬಿರಾದಾರ, ಅಂದಿನ ಉಗ್ರಾಣಾಧೀಕ್ಷಕರು, ಇವರು ಕಾರಣ ಕೇಳುವ ನೋಟೀಸಿಗೆ ಮೇಲೆ ಓದಲಾದ ಕ್ರಮ ಸಂ.(4) ರಲ್ಲಿ ಲಿಖಿತ ಉತ್ತರವನ್ನು ಸಲ್ಲಿಸಿ, ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿದ್ದರು. ಇವರ ಲಿಖಿತ ಹೇಳಿಕೆಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಅಂದಿನ ಕಾರ್ಯಪಾಲಕ ಇಂಜಿನಿಯರ್ ಹೊಣೆಗಾರರಲ್ಲವೆಂದು ಸರ್ಕಾರವು ಮನಗಂಡು ಶ್ರೀ ಎಸ್.ಕೆ. ಬಿರಾದಾರ್ ಇವರ ಲಿಖಿತ ಹೇಳಿಕೆಗಳು ಸಮರ್ಪಕವಾಗಿಲ್ಲವೆಂದು ಕಂಡು ಬಂದಿರುವುದರಿಂದ ಮತ್ತು ಆಪಾದಿತರು ಆರೋಪಿತ ದುರ್ನಡತೆಯನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡು ಬರುವುದರಿಂದ ಆಪಾದಿತರ ಮೇಲಿನ ಆಪಾದನೆಗಳ ಬಗ್ಗೆ ಸತ್ಯಾಂಶಗಳನ್ನು ಅರಿಯಲು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 87 ಜಿಪಅ 04, ಬೆಂಗಳೂರು, ದಿನಾಂಕ: 31ನೇ ಮಾರ್ಚ್, 2006**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಸ್.ಕೆ.ಬಿರಾದಾರ, ಅಂದಿನ ಉಗ್ರಾಣ ಅಧೀಕ್ಷಕರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ , ಚಿತ್ರದುರ್ಗ ಇವರ ಮೇಲಿನ ಆಪಾದನೆಗಳ ಬಗ್ಗೆ ಕೆ.ಸಿ.ಎಸ್.ಆರ್.ನ ನಿಯಮ 214 ಹಾಗೂ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರಲ್ಲಿ ನಿಗದಿಪಡಿಸಲಾದ ವಿಧಿ ವಿಧಾನಗಳನ್ನು ಅನುಸರಿಸಿ ವಿವರವಾದ ವಿಚಾರಣೆ ನಡೆಸಲು ನಿಯಮ 11(2)ರ ರಿತ್ಯ ಶ್ರೀ ಎನ್.ಎಸ್. ಸಂಗೊಳ್ಳಿ ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ. 415/02, ಎಫ್ ಬ್ಲಾಕ್, ಸಹಕಾರ ನಗರ, ಬೆಂಗಳೂರು-92 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11(5)ರ ರೀತ್ಯ ಸಹಾಯಕ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಚಿತ್ರದುರ್ಗ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಶಿಸಿದೆ.

ಈ ವಿಚಾರಣೆಯನ್ನು 3 ತಿಂಗಳೊಳಗಾಗಿ ನಡೆಸಿ, ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ನಿಯಮಾನುಸಾರ ನಿಗದಿತ ಸಂಭಾವನೆಯನ್ನು ಪಡೆಯಲು ಅರ್ಹರಿರುತ್ತಾರೆ.

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,**

**ಎಸ್.ಸಿ. ಸುಂದರ**

ಪಿ.ಆರ್.549

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ತಾಂಡವ ಮೂರ್ತಿ, ಸಿಪಿಸಿ-283, ಕಿಕ್ಕೇರಿ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಇವರ ಆದೇಶ ಸಂಖ್ಯೆ:ಸಿಬ್ಬಂದಿ/12/ಡಿಇ-10/03-04 ಓಬಿ ಸಂಖ್ಯೆ:99/04-05, ದಿನಾಂಕ:20-07-2004.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ:ಅಪೀಲು/13/2004-05, ದಿನಾಂಕ:11-07-2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:23-09-05.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/122/2005, ದಿನಾಂಕ:31-01-2006.

**ಪ್ರಸ್ತಾವನೆ:**

ಶ್ರೀ ತಾಂಡವಮೂರ್ತಿ, ಸಿಪಸಿ-283, ಕಿಕ್ಕೇರಿ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಶ್ರೀ ಎಸ್.ಬಿ.ತಾಂಡವಮೂರ್ತಿ ಸಿಪಿಸಿ-283, ಇವರು ಸಿಪಿಐ ನಾಗಮಂಗಲ ವೃತ್ತ ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದಾಗ, ನಾಗಮಂಗಲ ಪೊಲೀಸ್ ಠಾಣೆ ಮೊ.ನಂ.95:2002 ಕಲಂ.279,337,338,304(ಎ) ಐಪಿಸಿ ಪ್ರಕರಣದ ದಾಖಲಾತಿಗಳನ್ನು ಪಡೆದುಕೊಳ್ಳಲು ಶ್ರೀ ಕೆಂಪಯ್ಯ ಬಿನ್ ಸಣ್ಣೇಗೌಡ ಹಾಗೂ ಶಿವರಾಮು ಇವರುಗಳು ನಾಗಮಂಗಲ ವೃತ್ತ ಕಛೇರಿಗೆ ಬಂದಾಗ ವೃತ್ತ ನಿರೀಕ್ಷಕರು ಕಛೇರಿಯಲ್ಲಿ ಇಲ್ಲದಿದ್ದು, ಆ ಸಮಯದಲ್ಲಿ ಈ ಪೇದೆಯವರು ಸದರಿ ಪ್ರಕರಣದ ದಾಖಲಾತಿಗಳನ್ನು ಕೊಡಲು ರೂ.500-00 ಹಣವನ್ನು ಕೊಡಿ ಎಂದು ಅವರಿಂದ ರೂ.500-00ಗಳನ್ನು ಪಡೆದು ನಂತರ ದಿನಾಂಕ:08-05-2003ರಂದು ಪ್ರಕರಣದ ಎಂವಿಐಆರ್, ಪಿಎಂಆರ್, ಎಫ್‌ಐಆರ್ ಹಾಗೂ ಮಹಜರ್ ಹಾಗೂ ಜೆರಾಕ್ಸ್ ಪ್ರತಿಗಳನ್ನು ಸಿಪಿಐ ಯವರ ಅನುಮತಿಯಿಲ್ಲದೆ ನಕಲು ಪ್ರತಿಯ ಮೇಲೆ ಸಹಿ ಮಾಡಿ ಅರ್ಜಿದಾರರಿಗೆ ಕೊಟ್ಟಿರುತ್ತಾರೆ. ಪೇದೆಯವರು ಹಣದ ಆಮಿಷಕ್ಕೆ ಒಳಗಾಗಿ ಸರ್ಕಾರದ ದಾಖಲಾತಿಗಳನ್ನು ಮೇಲಾಧಿಕಾರಿಗಳ ಅನುಮತಿ ಪಡೆಯದೆ ಸ್ವಯಂ ನಿರ್ಧಾರ ತೆಗೆದುಕೊಂಡು, ಪ್ರತಿಗಳನ್ನು ಸಹಿ ಮಾಡಿಕೊಟ್ಟು ತಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ದುರ್ನಡತೆ, ಬೇಜವಾಬ್ದಾರಿತನ ಹಾಗೂ ಅಶಿಸ್ತನ್ನು ಪ್ರದರ್ಶಿಸಿರುತ್ತಾರೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲ ಎಂದು ಸಲ್ಲಿಸಿದ ವರದಿಯನ್ನು ಒಪ್ಪಿದ ಶಿಸ್ತು ಪ್ರಾಧಿಕಾರಿಯವರು ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:20-07-2004ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಸಂಚಿತ ಪರಿಣಾಮ ಬೀರುವಂತೆ ಒಂದು ವರ್ಷದ ಅವಧಿಗೆ ವಾರ್ಷಿಕ ವೇತನ ಬಡ್ತಿಯನ್ನು ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ದಕ್ಷಿಣ ವಲಯ, ಮೈಸೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:11-07-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಆರೋಪವು ಸಾಬೀತಾಗಿಲ್ಲದಿದ್ದರೂ, ಅರ್ಜಿದಾರರು ಎಸಗಿರುವ ದುಷ್ಕೃತ್ಯವು ಕ್ಷಮಾರ್ಹವಲ್ಲ, ಆದರೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಶಿಸ್ತನ್ನು ಪಾಲಿಸದೇ ದುರ್ನಡತೆ ಪ್ರದರ್ಶಿಸಿರುವುದು ಕಂಡುಬರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 54 ಪೊಸಿಅ 2006, ಬೆಂಗಳೂರು, ದಿನಾಂಕ: 24ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ತಾಂಡವಮೂರ್ತಿ, ಸಿಪಿಸಿ-283 ಕಿಕ್ಕೇರಿ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:23-09-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್.569

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಗಂಗಹನುಮಯ್ಯ, ಎಎಸ್‌ಐ, ಎನ್‌ಟಿ ಪೇಟೆ ಪೊಲೀಸ್ ಠಾಣೆ, ಬೆಂಗಳೂರು ನಗರ ರವರ ಪರಿಷ್ಕರಣ ಮೇಲ್ಮನವಿ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಉತ್ತರ ವಿಭಾಗ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:19/ಡಿಇ/ಆರ್-7/ಡಿಸಿಪಿ/ಉವ/2004, ದಿನಾಂಕ:16-07-2004.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್ ಆಡಳಿತ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:30/ ಅಪೀಲು/2004, ದಿನಾಂಕ:03-03-2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:08-07-2005.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/65/2005, ದಿನಾಂಕ:03-11-2005.

**ಪ್ರಸ್ತಾವನೆ:**

ಶ್ರೀ ಗಂಗಹನುಮಯ್ಯ, ಎಎಸ್ಐ ಆರ್‌ಎಮ್‌ಸಿ ಯಾರ್ಡ್ ಪೊಲೀಸ್ ಠಾಣೆ, ಬೆಂಗಳೂರು ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

"ನೀವು RMC ಯಾರ್ಡ್ ಪೊಲೀಸ್ ಠಾಣೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ನಿಮಗೆ ದಿನಾಂಕ:16-03-2004ರಂದು ರಾತ್ರಿ 8-00 ಘಂಟೆಯಿಂದ ಬೆಳಿಗ್ಗೆ 7-00 ಘಂಟೆಯವರೆಗೆ ಠಾಣಾ ಉಸ್ತುವಾರಿ ಕೆಲಸ ನೇಮಿಸಲಾಗಿತ್ತು. ಆ ದಿನ ರಾತ್ರಿ ಸುಮಾರು 1-45 ಘಂಟೆಯಲ್ಲಿ ಎಸಿಪಿ ಯಶವಂತಪುರ ರವರು ವೈರ್‌ಲೆಸ್ ಮುಖಾಂತರ ನಿಮ್ಮ ಠಾಣೆಯ ಸ್ವಾಟಿಕ್‌ಗೆ ಕರೆ ನೀಡಿದಾಗ ಮತ್ತು ನಿಯಂತ್ರಣ ಕೋಣೆಯಿಂದಲೂ ಕರೆ ನೀಡಿದಾಗ ಕರೆ ನೀಡಿದಾಗ ಉತ್ತರ ನೀಡಿರುವುದಿಲ್ಲ, ಹಾಗೂ NH 4, MEI, ಕಾರ್ಖಾನೆ ಬಳಿ ನಡೆದ ಘಟನೆಯ ಸ್ಥಳಕ್ಕೆ ಸಹ ಹೋಗಿರುವುದಿಲ್ಲ. ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ಠಾಣೆಯಲ್ಲಿ ರಾತ್ರಿ ವೇಳೆಯಲ್ಲಿ ಎಚ್ಚರಿಕೆಯಿಂದ ಇದ್ದು, ಠಾಣೆಗೆ ಬರುವ ಎಲ್ಲಾ ರೀತಿಯ ಸಂದೇಶಗಳು, ದೂರವಾಣಿ ಕರೆಗಳನ್ನು ಆಯಾ ಕಾಲಕ್ಕೆ ಸ್ವೀಕರಿಸಿ, ತಕ್ಷಣಕ್ಕೆ ಸ್ಪಂದಿಸುವುದು ನಿಮ್ಮ ಆದ್ಯ ಕರ್ತವ್ಯವಾಗಿರುತ್ತದೆ. ಆದರೆ ಇಂತಹ ಗುರುತರವಾದ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸದೆ, ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನವನ್ನು ತೋರಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಉತ್ತರ ವಿಭಾಗ, ಬೆಂಗಳೂರು ನಗರ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:16-07-2004ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಒಂದು ವರ್ಷದ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ, ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಆಡಳಿತ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:03-03-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಒಬ್ಬ ಜವಾಬ್ದಾರಿತಯುತ ಪೊಲೀಸ್ ಅಧಿಕಾರಿಯಾಗಿದ್ದು, ವೈರ್‌ಲೆಸ್ ಸೆಟ್ ಸರಿಯಾಗಿ ಕೆಲಸ ಮಾಡಿಲ್ಲ, ಎಂದು ಸಬೂಬು ಹೇಳುವುದು ಸಮಂಜಸವಾಗಿರುವುದಿಲ್ಲ. ಪೊಲೀಸ್ ಇಲಾಖೆಯು ಕರ್ತವ್ಯ ದಕ್ಷತೆಗೆ ಹೆಸರಾಗಿದ್ದು, ತಕ್ಷಣ ವೈರ್‌ಲೆಸ್ ಸೆಟ್‌ನ್ನು ಸರಿಪಡಿಸಿ, ತನ್ನ ಕರ್ತವ್ಯ ಸರಿಯಾಗಿ ಪಾಲಿಸಬೇಕಾಗಿತ್ತು. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಕಂಡುಬರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 215 ಪೊಸಿಅ 2005, ಬೆಂಗಳೂರು, ದಿನಾಂಕ:21ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗಂಗಹನುಮಯ್ಯ, ಎ.ಎಸ್.ಐ. ಎನ್‌ಟಿ ಪೇಟೆ, ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:08-07-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್.570

**ವಿಷಯ:** ಶ್ರೀ ರವಿ ಬಿ ಮಾಲಗೀರ್, ಮಾಜಿ ಎಪಿಸಿ-239, ಡಿಎಆರ್ ಹಾವೇರಿ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ-2/ಇವಿ-5/2003/ಓಬಿ ಸಂಖ್ಯೆ:303/04-05, ದಿನಾಂಕ:06-10-2004.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಅಪೀಲು/35/ಉವ/04, ದಿನಾಂಕ:04-04-2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:0-05-2005.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2//78/2005, ದಿನಾಂಕ:03-11-2005.

**ಪ್ರಸ್ತಾವನೆ:**

ಶ್ರೀ ರವಿ, ಬಿ.ಮಾಲಗೇರ ಎಪಿಸಿ-239 ಡಿಎಆರ್ ಹಾವೇರಿ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1) " ಎಪಿಸಿ-239 ರವಿ, ಬಿ.ಮಾಲಗೇರ, ಡಿಎಆರ್, ಹಾವೇರಿ ಆದ ನೀವು ಶಿಸ್ತು ಪಾಲನೆ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದರೂ, ಆದ್ಯ ಕರ್ತವ್ಯದಲ್ಲಿ ಶಿಸ್ತು ಪಾಲನೆ ಮಾಡದೇ, ದಿನಾಂಕ:20-05-2001ರಂದು ಹಿಂದು ಸಂಪ್ರದಾಯದಂತೆ ಶ್ರೀಮತಿ ಸುಲೋಚನಾ ಎಂಬುವರೊಂದಿಗೆ ವಿವಾಹವಾಗಿದ್ದು, ತದನಂತರ ಪತ್ನಿ ಶ್ರೀಮತಿ ಸುಲೋಚನಾ ರವರೊಂದಿಗೆ ಸರಿಯಾಗಿ ಸಂಸಾರ ಮಾಡದೆ, ಇನ್ನೊಂದು ಹುಡುಗಿ ಯಾದ ಕುಮಾರಿ ರೂಪಾ, ಸು.ಶೆಟ್ಟರ, ಹಾವೇರಿ ಇವರೊಂದಿಗೆ ಮದುವೆಯಾಗಲು ಅನುಮತಿ ನೀಡಬೇಕೆಂದು ಪೀಡಿಸಿ, ಮಾನಸಿಕವಾಗಿ ಮತ್ತು ದೈಹಿಕವಾಗಿ ಹಿಂಸೆ ನೀಡಿ, ತೀವ್ರ ದುರ್ನಡತೆ ಪ್ರದರ್ಶಿಸಿರುತ್ತೀರಿ."

2) "ಹಿಂದೂ ವಿವಾಹ ನಿಯಮಗಳ ವಿರುದ್ಧವಾಗಿ ಅನಧೀಕೃತವಾಗಿ ರೂಪ ಶೆಟ್ಟರ ಎಂಬುವಳ ಜೊತೆಗೆ ಜೀವನ ನಡೆಸುತ್ತಿದ್ದು, ಅಲ್ಲದೆ, ದಿನಾಂಕ:16-09-2002ರಂದು ಹರಿಹರದ ಸಬ್‌ರಿಜಿಸ್ಟ್ರಾರ್ ಕಚೇರಿಗೆ ವಿಶೇಷ ವಿವಾಹ ಕಾಯ್ದೆ ಅಡಿಯಲ್ಲಿ ನೋಂದಣಿ ಮಾಡಿಕೊಳ್ಳಲು ಅರ್ಜಿ ಸಲ್ಲಿಸಿದ್ದು, ಶ್ರೀಮತಿ ಸುಲೋಚನಾ ಇವರ ಒಪ್ಪಿಗೆ ಪಡೆಯದೇ, ಕುಮಾರಿ ರೂಪ ಎಂಬುವಳೊಂದಿಗೆ ಅನಧಿಕೃತವಾಗಿ ವಿವಾಹವಾಗಲು ಪ್ರಯತ್ನಿಸಿ, ವಿವಾಹವಾಗಿದ್ದು, ಆದ್ದರಿಂದ ತೀವ್ರ ದುರ್ನಡತೆ ಪ್ರದರ್ಶಿಸಿರುವುದಲ್ಲದೆ, ಇಲಾಖಾ ಘನತೆಗೂ ಧಕ್ಕೆ ತಂದಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಹಾವೇರಿ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:06-10-2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:04-04-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶಿಸ್ತು ಪಾಲನಾ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ, ಶಿಸ್ತು ಪಾಲನೆ ಮಾಡದೆ, ಘೋರ ಅಪರಾಧವೆಸಗಿದ್ದು, (ನಡತೆ) ನಿಯಮಗಳ ಉಲ್ಲಂಘನೆ ಮಾಡಿರುವುದು ಘೋರ ಅಪರಾಧ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 370 ಪೊಸಿಅ 2005, ಬೆಂಗಳೂರು, ದಿನಾಂಕ:21ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರವಿ, ಬಿ.ಮಾಲಗೇರ ಮಾಜಿ ಎಪಿಸಿ-239, ಡಿಎಆರ್ ಹಾವೇರಿ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:0-05-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್.571

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## FINANCE SECRETARIAT

**Subject:** Grant of Interim Relief.

**Government Order No. FD 8 SRP 2006, Bangalore, Dated: 29th March, 2006**

Government have constituted Fifth State Pay Commission to go into the revision of pay scales of State Government employees, employees of aided education institutions/ local bodies and non-teaching staff of Universities and to evolve a new pay structure etc. Pending presentation of its final report, the 5th State Pay Commission has recommended for grant of Interim Relief to State Government employees including employees of local bodies and aided educational institutions and non-teaching staff of the Universities at the rate of 10% of basic pay subject to a minimum of Rs.300/- per month and maximum of Rs.1500/- per month with effect from 1st January 2006. Pending consideration of the demands of the Primary School Teacher's Association, the Commission has also recommended for grant of Special Allowance of Rs.200/- per month to the Primary School Teachers.

2. After careful examination of the Interim Report of the 5th State Pay Commission, Government have accepted its recommendations with modification that these recommendations be implemented with effect from 01.04.2006 and accordingly, the following orders are issued.

3. Government are pleased to sanction Interim Relief at the rate of 10% of basic pay subject to a minimum of Rs.300/- per month and maximum of Rs.1500/- per month to full time State Government employees who are no regular time scale of pay with effect from 1st April 2006. Government are also pleased to sanction Special Allowance of Rs.200/- per month to the Primary School Teachers including Primary School Teachers of aided educational institutions with effect from 1st April 2006.

4. The benefit of the Interim Relief/ Special Allowance sanctioned by this Order shall also apply to the following categories of employees who are on regular time scale of pay:

(i) Staff borne on the Work-charged Establishments.

(ii) Whole-time employees paid from contingencies.

(iii) Full time employees of aided educational institutions.

(iv) Full time non-teaching staff of the Universities.

(v) Full time employees of the Local Bodies.

5. These orders will, however, not apply to the persons who are on UGC/ AICTE/ CAR/ FNJPC scales of pay and also to those who have been re-employed after retirement or who have been appointed on contract basis.

6. The amount of Interim Relief/ Special Allowance snactioned by this Order shall be shown as a distinct element of remuneration and shall be adjusted against the increase in pay to the recommended by the Pay Commission in its final Report.

7. For the purpose of calculation of Interim Relief, the term **"Basic Pay"** means pay drawn by the Government servant in the scale of pay applicable to the post held by him or in the selection time scale of pay granted under the Karnataka Civil Services (Time Bound Advancement) Rules, 1983 or in the senior scale of pay granted under the Karnataka Civil Services (Automatic Grant of Special Promotion to Senior Scale of Pay) Rules, 1991 and includes-

(a) stagnation increment, if any, granted to him above the maximum of the scale of pay;

(b) additional increment, if any, granted to him above the maximum of the scale of pay, in accordance with the provisions of Rule 6 of the Karnataka Civil Services (Service and Kannada Language Examination) Rules, 1974;

(c) personal pay, if any, granted to him under sub-rule (3) of Rule 7 of the Karnataka Civil Services (Revised Pay) Rules, 1999.

8. Basic Pay shall not include any emoluments other than those specified in para 7 above.

9. In respect of the employees of local bodies (Municipalitites/ Muncipal Corporations), the expenditure that shall be incurred on account of extension of the benefit sanctioned by this order shall be borne by the concerned local bodies.

10. The payment on account of Interim Relief involving fractions of fifty paise and above shall be rounded off to the next rupee and fractions of less than fifty paise shall be ignored.

11. The amount of Interim Relief sanctioned in this Order will be sui generis and shall not count as emoluments for purpose of pensionary benefits or any other purpose.

12. The expenditure on Interim Relief will be booked under the same head of account from which the pay is being drawn.

By Order and in the Name of the Governor of Karnataka,

PR-588

**N.T. NAIK**

Deputy Secretary to Government,
Finance Department (Services-2).

## ಆರ್ಥಿಕ ಸಚಿವಾಲಯ

**ವಿಷಯ:** ರಾಜ್ಯ ಸರ್ಕಾರದ ಅಧಿಕಾರಿಗಳು/ ರಾಜ್ಯ ಸಾರ್ವಜನಿಕ ವಲಯ ಉದ್ದಿಮೆಗಳ ಕಾರ್ಯನಿರ್ವಾಹಕ ಅಧಿಕಾರಿಗಳು ಕರ್ತವ್ಯದ ಮೇಲೆ ದೇಶದ ಹೊರಗಡೆ ಕೈಗೊಂಡ ಪ್ರಯಾಣಗಳಿಗಾಗಿ ವಿಮಾನ ಪ್ರಯಾಣದ ಕ್ರಮಗೊಳಿಸುವಿಕೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 09 ಎಸ್‌ಆರ್‌ಎ 2000, ದಿನಾಂಕ: 20.11.2003.

2. ಭಾರತ ಸರ್ಕಾರದ ಆರ್ಥಿಕ ಮಂತ್ರಾಲಯದ ಅಧಿಕೃತ ಜ್ಞಾಪನ ಸಂಖ್ಯೆ: ಎಫ್.ಸಂ.10/2/98/ ಐಸಿ ಮತ್ತು ಎಫ್.ಸಂಖ್ಯೆ:19030/2/97-ಇIV ದಿನಾಂಕ: 17.04.1998.

**ಪ್ರಸ್ತಾವನೆ:**

ಮೇಲೆ ಕ್ರ.ಸಂ.(1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ದಿನ ಒಂದರ ಭತ್ಯೆ, ಪ್ರಯಾಣ ಭತ್ಯೆ ಮುಂತಾದವುಗಳನ್ನು ಕ್ರಮಗೊಳಿಸುವುದರ ವಿಷಯದಲ್ಲಿ ವಿವರವಾದ ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ. ಸದರಿ ಸರ್ಕಾರಿ ಆದೇಶದ ಇತರ ವಿಷಯಗಳ ನಡುವೆ, ಪೂರಕ ಮಾರ್ಗಸೂಚಿಗಳಲ್ಲಿ, ಅಧಿಕಾರಿಗಳು ವಿಮಾನ ಪ್ರಯಾಣದ ವಿವಿಧ ದರ್ಜೆಗಳಲ್ಲಿ ಪ್ರಯಾಣ ಮಾಡುವ ಅಧಿಕಾರವನ್ನು ನಿಗದಿಪಡಿಸಿರುತ್ತದೆ.

ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ, ಭಾರತ ಸರ್ಕಾರವು ಪ್ರಯಾಣ ಭತ್ಯೆಗಳು, ಪ್ರಯಾಣಗಳ ದರ್ಜೆ ಮುಂತಾದವುಗಳ ಸಂಬಂಧದಲ್ಲಿ ವಿವರವಾದ ಸೂಚನೆಗಳನ್ನು ಹೊರಡಿಸಿರುತ್ತದೆ.

ರಾಜ್ಯ ಸರ್ಕಾರವು ದಿನ ಒಂದರ ಭತ್ಯೆ, ಪ್ರಯಾಣ ಭತ್ಯೆ ಮುಂತಾದವುಗಳ ಕ್ರಮಗೊಳಿಸುವುದರ ವಿಷಯದಲ್ಲಿ ಭಾರತ ಸರ್ಕಾರದ ಸೂತ್ರಗಳನ್ನು ಅನುಸರಿಸುತ್ತಿದ್ದು, ಈ ಕಾರಣದಿಂದಾಗಿ ವಿಮಾನ ಪ್ರಯಾಣದ ವಿವಿಧ ದರ್ಜೆಗಳಲ್ಲಿ ಪ್ರಯಾಣ ಮಾಡುವ ಅಧಿಕಾರಿಗಳ ಅರ್ಹತಾ ವಿಷಯದಲ್ಲಿ ಭಾರತ ಸರ್ಕಾರದ ಅದೇ ಸೂತ್ರಗಳನ್ನು ಅಳವಡಿಸಿಕೊಳ್ಳುವುದು ಅಗತ್ಯವಾಗಿರುವುದಾಗಿ ಭಾವಿಸಿರುತ್ತದೆ. ಆದ್ದರಿಂದ, ಈ ಮುಂದಿನ ಆದೇಶವನ್ನು ಮಾಡಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಎಸ್‌ಆರ್‌ಎ 2006, ಬೆಂಗಳೂರು, ದಿನಾಂಕ:5ನೇ ಜನವರಿ, 2006**

ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 09 ಎಸ್‌ಆರ್‌ಎ 2003, ದಿನಾಂಕ: 20.11.2003ರ ಅನುಬಂಧದಲ್ಲಿ ನಿರ್ದಿಷ್ಟಪಡಿಸಿದ ಪೂರಕ ಮಾರ್ಗಸೂಚಿಗಳ 9ನೇ ಖಂಡವನ್ನು ಭಾಗಶಃ ಮಾರ್ಪಡಿಸಿ, ಕರ್ನಾಟಕ ಸರ್ಕಾರವು ರಾಜ್ಯ ಸರ್ಕಾರದ ಅಧಿಕಾರಿಗಳು ಮತ್ತು ಸಾರ್ವಜನಿಕ ವಲಯ ಉದ್ದಿಮೆಗಳ ಕಾರ್ಯನಿರ್ವಾಹಕ ಅಧಿಕಾರಿಗಳು ಸರ್ಕಾರಿ ಕರ್ತವ್ಯಗಳ ಮೇಲೆ ದೇಶದ ಹೊರಗೆ ಇವರುಗಳು ಕೈಗೊಳ್ಳುವ ಪ್ರಯಾಣಗಳ ಸಂಬಂಧವಾಗಿ ವಿವಿಧ ದರ್ಜೆಗಳಲ್ಲಿ ಪ್ರಯಾಣ ಮಾಡುವ ಇವರುಗಳ ಅರ್ಹತಾ ವಿಷಯದಲ್ಲಿ ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ ಸೂಚಿಸಿದ ಭಾರತ ಸರ್ಕಾರದ ಸೂತ್ರಗಳನ್ನು ಅಳವಡಿಸಿಕೊಳ್ಳಲು ನಿರ್ಧರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಗೋಪಾಲಕೃಷ್ಣ**

ಪಿ.ಆರ್.589

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು-1)

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಸಿ.ಎಂ. ಮಲ್ಲಿಕಾರ್ಜುನ, ಉಪನಿಯಂತ್ರಕರು, ಕಾನೂನು ಮಾಪನ ಶಾಸ್ತ್ರ ಇಲಾಖೆ, ಬೆಂಗಳೂರು ಇವರ ಅಮಾನತ್ತನ್ನು ರದ್ದುಪಡಿಸಿ ಉಪನಿಯಂತ್ರಕರ ಹುದ್ದೆಗೆ ಪುನರ್ ನಿಯೋಜಿಸುವ ಬಗ್ಗೆ.

**ಓದಲಾಗಿದೆ:** 1. ಆದೇಶ ಸಂಖ್ಯೆ: ಆನಾಸ.54. ಕಾಮಾಸೇ. 2005, ಬೆಂಗಳೂರು ದಿನಾಂಕ:10.11.2005.

2. ಕರ್ನಾಟಕ ಲೋಕಾಯುಕ್ತ ಕಛೇರಿಯ ಪತ್ರ ಸಂಖ್ಯೆ:ಲೋಕ್/ ಐಎನ್‌ವಿ (ಜಿ)/ ಸಿಟಿ/ ಕ್ರೈಂ.22/2005, ದಿನಾಂಕ:17.01.2006.

3. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ:8524/ 2005ರ ಸಂಬಂಧ ದಿನಾಂಕ: 15.02.2006ರಂದು ನೀಡಿರುವ ತೀರ್ಪು.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಸಿ.ಎಂ. ಮಲ್ಲಿಕಾರ್ಜುನ, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಇವರನ್ನು ಟ್ರಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಲೋಕಾಯುಕ್ತ ಕಛೇರಿಯವರು ಮಾಡಿದ ಶಿಫಾರಸ್ಸಿನನ್ವಯ ಲೋಕಾಯುಕ್ತ ಪ್ರಕರಣದ ವಿಚಾರಣೆಯನ್ನು ಬಾಕಿ ಇರಿಸಿ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಲೋಕಾಯುಕ್ತ ಕಛೇರಿಯವರು ಶ್ರೀ ಸಿ.ಎಂ. ಮಲ್ಲಿಕಾರ್ಜುನ, ಉಪನಿಯಂತ್ರಕರು, ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ನಿರ್ಧರಿಸಲಾಗಿದ್ದು, ಇವರ ವಿರುದ್ಧ ಸಧ್ಯದಲ್ಲಿಯೇ ದೋಷಾರೋಪಣಾ ಪಟ್ಟಿಯನ್ನು ನಗರದ ವಿಶೇಷ ನ್ಯಾಯಾಲಯದಲ್ಲಿ ಸಲ್ಲಿಸಲಾಗುವುದಾಗಿ ತಿಳಿಸಿದ್ದಾರೆ. ಅಲ್ಲದೆ ಆಪಾದಿತ ಅಧಿಕಾರಿಯನ್ನು ಅಮಾನತ್ತಿನಿಂದ ಬಿಡುಗಡೆ ಮಾಡಿ ಮರು ನೇಮಕಾತಿ ಮಾಡುವಾಗ ಈ ಪ್ರಕರಣ ನಡೆದ ಸ್ಥಳವನ್ನು ಹೊರತುಪಡಿಸಿ ಬೇರೆ ಸ್ಥಳಕ್ಕೆ ನೇಮಕ ಮಾಡಲು ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ: 15.02.2006ರ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ತೀರ್ಪಿನಲ್ಲಿ ನೇಮಕಾತಿ ಪ್ರಾಧಿಕಾರವು ಅಮಾನತ್ತನ್ನು ರದ್ದುಗೊಳಿಸಲು ಇಚ್ಛಿಸಿದಲ್ಲಿ ನ್ಯಾಯಾಲಯದ ಅಭ್ಯಂತರವಿಲ್ಲವೆಂದು ತಿಳಿಸಿ ಸೂಕ್ತ ಕ್ರಮ ಕೈಗೊಳ್ಳಲು ಸೂಚಿಸಿದೆ.

ಆದ್ದರಿಂದ ಈ ಆಪಾದಿತ ಅಧಿಕಾರಿಯ ವಿರುದ್ಧ ಲೋಕಾಯುಕ್ತ ಕಛೇರಿಯಲ್ಲಿ ಇರುವ ಕ್ರಿಮಿನಲ್ ಮೊಕದ್ದಮೆಯನ್ನು ಕಾಯ್ದಿರಿಸಿ ಸದರಿಯವರ ಅಮಾನತ್ತನ್ನು ತೆರವುಗೊಳಿಸಿ ಕೆಲಸಕ್ಕೆ ಪುನರ್ ನೇಮಕ ಮಾಡಲು ಉದ್ದೇಶಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 54 ಕಾಮಾಸೇ 2005, ಬೆಂಗಳೂರು, ದಿನಾಂಕ:15ನೇ ಏಪ್ರಿಲ್, 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(5)(ಗ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಮಾನತ್ತಿನಲ್ಲಿರುವ ಶ್ರೀ ಸಿ.ಎಂ. ಮಲ್ಲಿಕಾರ್ಜುನ, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ಇವರ ವಿರುದ್ಧ ಇರುವ ಲೋಕಾಯುಕ್ತ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: 22/ 2005ರ ವಿಚಾರಣೆಯನ್ನು ಕಾಯ್ದಿರಿಸಿ ಅವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಳಗಾಂ, ಇಲ್ಲಿ ಖಾಲಿ ಇರುವ ಹುದ್ದೆಗೆ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪಿ.ಆರ್.590

ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆ, ಮಧುಗಿರಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಲಾಗಿರುವ ಮಾಸ್ಟರ್ ಪ್ಲಾನ್‌ಗೆ ಅಂತಿಮ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**1. ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 26 ಬೆಂರೂಪ್ರಾ 2001, ದಿನಾಂಕ: 20.03.2001.

2. ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 20 ಬೆಂರೂಪ್ರಾ 2003, ದಿನಾಂಕ: 20.02.2003.
3. ಮುಖ್ಯಾಧಿಕಾರಿ, ಪುರಸಭೆ ಯೋಜನಾ ಪ್ರಾಧಿಕಾರ, ಪುರಸಭೆ, ಮಧುಗಿರಿ ಇವರ ಪತ್ರ ಸಂಖ್ಯೆ: ಮಸ್ಥಯೋಪಾ: ಮಧುಗಿರಿ; ಮಾಪ್ಲಾ: 2005-06/ 18, ದಿನಾಂಕ: 24.01.2006.
4. ನಗರ ಯೋಜನಾ ನಿರ್ದೇಶಕರ ಟಿಪ್ಪಣಿ ಸಂಖ್ಯೆ: ನಯೋ (21): ಮಾ.ಪ್ಲಾನ್: ಅಂತಿಮ: ಮಧುಗಿರಿ:738: 2005-06, ದಿನಾಂಕ: 24.02.2006.

**ಪ್ರಸ್ತಾವನೆ:**

1) ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಸರ್ಕಾರವು ಮಧುಗಿರಿ ಪುರಸಭೆಯನ್ನು ಸ್ಥಳೀಯ ಯೋಜನಾ ಪ್ರಾಧಿಕಾರವೆಂದು ಘೋಷಿಸಿರುತ್ತದೆ. ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮಧುಗಿರಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)ರನ್ವಯ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

2) ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಮುಖ್ಯಾಧಿಕಾರಿ, ಪುರಸಭೆ, ಮಧುಗಿರಿ ಇವರು ಮಧುಗಿರಿ ಸ್ಥಳೀಯ ಯೋಜನಾ ಪ್ರಾಧಿಕಾರಕ್ಕೆ ತಯಾರಿಸಿರುವ ಮಾಸ್ಟರ್ ಪ್ಲಾನ್‌ಗೆ ಸರ್ಕಾರದ ಅಂತಿಮ ಅನುಮೋದನೆ ಪಡೆಯಲು ಯೋಜನೆಯ ನಕ್ಷೆಗಳ ಮತ್ತು ವರದಿಗಳನ್ನು ಕಳುಹಿಸಿರುತ್ತಾರೆ. ಅದರಂತೆ ಮುಂದಿನ 20 ವರ್ಷಗಳ ಯೋಜನಾ ಅವಧಿಗೆ ಅಂದರೆ 2021ರ ವೇಳೆಗೆ ಜನಸಂಖ್ಯೆಯು 40000 ಆಗಬಹುದೆಂದು ಅಂದಾಜಿಸಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಪ್ರಕರಣ 12 (ಕರ್ನಾಟಕ ನಗರ ಮತ್ತು ಗ್ರಾಮಾಂತರ (ತಿದ್ದುಪಡಿ) ಕಾಯ್ದೆ, 2004 ರಂತೆ) ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ 'ಮಾಸ್ಟರ್ ಪ್ಲಾನ್'ನ್ನು ರೂಪಿಸಲಾಗಿದೆ ಹಾಗೂ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯ ವಲಯ ನಿಯಮಾವಳಿಗಳನ್ನು ರಚಿಸಲಾಗಿದೆ.

3) ಯೋಜನೆಯಲ್ಲಿ ಭವಿಷ್ಯದ ಬೆಳವಣಿಗೆಗಾಗಿ ಒಟ್ಟು 402.44 ಹೆಕ್ಟೇರ್ ಪ್ರದೇಶವನ್ನು ಪ್ರಸ್ತಾವಿಸಲಾಗಿದ್ದು, ಇದರಲ್ಲಿ ವಸತಿಗಾಗಿ 226.62 ಹೆಕ್ಟೇರ್, ವಾಣಿಜ್ಯಕ್ಕಾಗಿ 6.92 ಹೆಕ್ಟೇರ್, ಕೈಗಾರಿಕೆಗಾಗಿ 7.99 ಹೆಕ್ಟೇರ್, ಸಾರ್ವಜನಿಕ/ ಅರೆ ಸಾರ್ವಜನಿಕ ಉದ್ದೇಶಕ್ಕಾಗಿ 28.87 ಹೆಕ್ಟೇರ್, ಉದ್ಯಾನ ಮತ್ತು ಬಯಲು ಜಾಗೆಗಾಗಿ 33.57 ಹೆಕ್ಟೇರ್, ನಾಗರೀಕ ಸೌಲಭ್ಯಕ್ಕಾಗಿ 6.77 ಹೆಕ್ಟೇರ್ ಹಾಗೂ ಸಾರಿಗೆ ಮತ್ತು ಸಂಪರ್ಕಕ್ಕಾಗಿ 85.20 ಹೆಕ್ಟೇರ್ ಪ್ರದೇಶವನ್ನು ಕಾಯ್ದಿರಿಸಲಾಗಿದೆ.

4) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(1)ರನ್ವಯ ಸರ್ಕಾರವು ಮಧುಗಿರಿ ಸ್ಥೂಲಾಭಿವೃದ್ಧಿ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿದ್ದು, ಈ ಬಗ್ಗೆ ಪ್ರಾಧಿಕಾರವು ಸಾರ್ವಜನಿಕ ಸಲಹೆ: ಆಕ್ಷೇಪಣೆಗಳನ್ನು ಆಹ್ವಾನಿಸಿ ದಿನಾಂಕ: 22.09.2003ರ 'ಪ್ರಜಾ ಪ್ರಗತಿ' ದಿನ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿರುತ್ತದೆ. ತತ್ಸಂಬಂಧ ಒಂದು ತಿಂಗಳ ಅವಧಿಯೊಳಗೆ ಸ್ವೀಕೃತವಾದ ಮನವಿಗಳನ್ನು ದಿನಾಂಕ: 13.02.2004ರಂದು ನಡೆದ ಪ್ರಾಧಿಕಾರದ ಸಭೆಯಲ್ಲಿ ಚರ್ಚಿಸಿ, ತೀರ್ಮಾನವಾದಂತೆ ಕೆಳಕಂಡ ಬದಲಾವಣೆಗಳನ್ನು ಅಳವಡಿಸಿ ಮಾಸ್ಟರ್ ಪ್ಲಾನ್‌ನ್ನು ಅಂತಿಮ ಅನುಮೋದನೆ ನೀಡಲು ಸಲ್ಲಿಸಿರುತ್ತಾರೆ.

ಅ) ಗುರುವಡೇರಹಳ್ಳಿ ಸ.ನಂ.21, 52, 24, 80, 78ರಲ್ಲಿ ಪ್ರಸ್ತಾಪಿಸಲಾಗಿದ್ದ 18 ಮೀ ರಸ್ತೆಯನ್ನು ಹಲವಾರು ಅಭಿವೃದ್ಧಿಗಳು ಇರುವ ಹಿನ್ನೆಲೆಯಲ್ಲಿ ಈ ರಸ್ತೆಯನ್ನು ದಕ್ಷಿಣಕ್ಕೆ ಸ.ನಂ.45, 47, 52, 60, 93, 91ರ ಮೂಲಕ ಹಾದುಹೋಗುವಂತೆ ರಸ್ತೆ ಪಂಕ್ತೀಕರಣ ಪ್ರಸ್ತಾಪಿಸಿರುವುದನ್ನು ಒಪ್ಪಲಾಗಿದೆ.

ಆ) ಹೊಸ ಬೆಳವಣಿಗೆಗಳು ಬರುತ್ತಿರುವ ಹಿನ್ನೆಲೆಯಲ್ಲಿ ಲಿಂಗೇನಹಳ್ಳಿ ಗ್ರಾಮದ ಸ.ನಂ.100, 14, 15, 16, 17, 18ನ್ನು ಹಳ್ಳದವರೆಗೆ ವಸತಿಗೆ ಕಾಯ್ದಿರಿಸಿರುವುದನ್ನು ಒಪ್ಪಲಾಗಿದೆ.

ಇ) ಹೊಸ ಅಭಿವೃದ್ಧಿಗಳು ಬರುತ್ತಿರುವ ಹಿನ್ನೆಲೆಯಲ್ಲಿ ಶಿರಾ ರಸ್ತೆಯಲ್ಲಿನ ಸ.ನಂ. 121, 122, 124, 125, 126ನ್ನು ವಸತಿಗೆ ಕಾಯ್ದಿರಿಸಿದ್ದು ಇದನ್ನು ಒಪ್ಪಲಾಗಿದೆ.

ಈ) ಗುರುವಡೇರಹಳ್ಳಿ ಸ.ನಂ.28, 29, 30, 34, 25ರ ಜಮೀನುಗಳಲ್ಲಿ ವಸತಿ ಬೆಳವಣಿಗೆಗಳು ಬಂದಿರುವುದರಿಂದ ಉದ್ಯಾನ ಮತ್ತು ಸಾರ್ವಜನಿಕ ಉದ್ದೇಶಕ್ಕೆ ಕಾಯ್ದಿರಿಸಿರುವುದನ್ನು ವಸತಿಗೆ ಬದಲಾಯಿಸಿದ್ದು ಇದನ್ನು ಒಪ್ಪಲಾಗಿದೆ.

ಉ) ಎಂ.ಎಸ್.ಬಿ. ರಸ್ತೆ ಹಾಗೂ ವಿ.ಎಸ್.ಬಿ. ರಸ್ತೆಯ ಎರಡು ಬದಿಗಳನ್ನು ವಾಣಿಜ್ಯಕ್ಕೆ ಕಾಯ್ದಿರಿಸಿರುವುದನ್ನು ಒಪ್ಪಲಾಗಿದೆ.

5. ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 32 ಬೆಂರೂಪ್ರಾ 2006, ಬೆಂಗಳೂರು, ದಿನಾಂಕ:10ನೇ ಏಪ್ರಿಲ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ನಿಬಂಧನೆಗಳಿಗೊಳಪಟ್ಟು ಮಧುಗಿರಿ ಸ್ಥಳೀಯ ಯೋಜನಾ ಪ್ರದೇಶದ ಮಾಸ್ಟರ್ ಪ್ಲಾನ್‌ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3)ರನ್ವಯ (ಕರ್ನಾಟಕ ನಗರ ಮತ್ತು ಗ್ರಾಮಾಂತರ (ತಿದ್ದುಪಡಿ) ಕಾಯ್ದೆ, 2004ರಂತೆ) ಅಂತಿಮ ಅನುಮೋದನೆ ನೀಡಿದೆ.

ಮಾಸ್ಟರ್ ಪ್ಲಾನ್‌ಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ಎಲ್ಲಾ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

ಪಿ.ಆರ್.592

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಸರೋಜ ಎಸ್. ಹಾದಿಮನಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾ.ಆ. ಕೇಂದ್ರ, ಚಡಚಣ, ಬಿಜಾಪುರ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಪಿಜಿ ಬೆಂವಿ (2): 26: 2004-05 ದಿನಾಂಕ: 16.01.2006.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರದಲ್ಲಿ ವರದಿ ಮಾಡುತ್ತಾ ಡಾ: ಸರೋಜ ಎಸ್. ಹಾದಿಮನಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಚಡಚಣ, ವಿಜಾಪುರ ಜಿಲ್ಲೆ ಇವರು ದಿನಾಂಕ: 13.12.2004 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಸದರಿ ವೈದ್ಯರು ಖಾಯಂಪೂರ್ಣ ಸೇವಾವಧಿಯಲ್ಲಿ ಇರುವಾಗಲೇ ಒಂದು ವರ್ಷಕ್ಕೂ ಮೇಲ್ಪಟ್ಟು ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ರೂಲ್ಸ್ 1977ರ ಉಪ ನಿಯಮ 6(1) 2ರ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸರ್ಕಾರವು ಆಯುಕ್ತರು, ಆಕುಕ ಸೇವೆಗಳು ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 154 ಹೆಚ್‌ಎಸ್‌ಹೆಚ್ 2006, ಬೆಂಗಳೂರು, ದಿನಾಂಕ:25ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಸರೋಜ ಎಸ್. ಹಾದಿಮನಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಚಡಚಣ, ವಿಜಾಪುರ ಜಿಲ್ಲೆ ಇವರು ದಿನಾಂಕ: 13.12.2004 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಒಂದು ವರ್ಷಕ್ಕೂ ಮೇಲ್ಪಟ್ಟು ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 13.12.2004 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6(1)2ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಪಿ.ಆರ್.596

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1).

**ವಿಷಯ:** ಮೈಸೂರು ವೈದ್ಯಕೀಯ ಕಾಲೇಜಿನ ಇಎನ್‌ಟಿ ಸಹಾಯಕ ಪ್ರಾಧ್ಯಾಪಕರಾದ ಡಾ: ಕೆ.ಜಿ. ವಿಜಯಕುಮಾರ್ ರವರ ವಿರುದ್ಧ ಅನಧಿಕೃತ ಗೈರುಹಾಜರಿ ಸಂಬಂಧ ಶಿಸ್ತು ಕ್ರಮದ ಇಲಾಖಾ ವಿಚಾರಣೆ.

**ಓದಲಾಗಿದೆ:**1. ದಿನಾಂಕ: 20.09.85 ಸಂಖ್ಯೆ: ಎಸ್‌ಆರ್‌ಒ (3) 79:83-84ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
2. ದಿನಾಂಕ: 30.01.88 ಸಂಖ್ಯೆ: ಆಕುಕ 365 ಎಂಎಂಸಿ 85ರ ನೋಟೀಸು.
3. ದಿನಾಂಕ: 03.12.90 ಸಂಖ್ಯೆ: ಆಕುಕ 365 ಎಂಎಂಸಿ 85ರ ಸರ್ಕಾರಿ ಆದೇಶ.
4. ದಿನಾಂಕ: 17.09.93 ಸಂಖ್ಯೆ: ಆಕುಕ 365 ಎಂಎಂಸಿ 85ರ ಸರ್ಕಾರಿ ಆದೇಶ.
5. ದಿನಾಂಕ: 20.01.96 ಸಂಖ್ಯೆ: ವಶ್ರೀಆ(3) 79:83-84ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
6. ದಿನಾಂಕ: 16.09.2000 ಸಂಖ್ಯೆ: ಆಕುಕ 631 ಎಂಎಂಸಿ 85ರ ಸರ್ಕಾರಿ ಆದೇಶ.
7. ದಿನಾಂಕ: 14.08.2001ರ ಇಲಾಖಾ ವಿಚಾರಣಾಧಿಕಾರಿಯವರ ಅಂತಿಮ ವರದಿ.
8. ದಿನಾಂಕ: 14.01.2003 ಸಂಖ್ಯೆ: ಆಕುಕ 365 ಎಂಎಂಸಿ 85ರ 2ನೇ ಕಾರಣ ಕೇಳುವ ನೋಟೀಸು.

**ಪೀಠಿಕೆ:**

1) ಮೈಸೂರು ವೈದ್ಯಕೀಯ ಕಾಲೇಜಿನ ಇಎನ್‌ಟಿ ಸಹಾಯಕ ಪ್ರಾಧ್ಯಾಪಕ ಡಾ: ಕೆ.ಜಿ. ವಿಜಯಕುಮಾರ್ ರವರು ದಿನಾಂಕ: 03.10.83 ರಿಂದ ದಿನಾಂಕ: 31.03.84 ರವರೆಗೆ ಸಂಯುಕ್ತ ರಜೆಗಾಗಿ ಅರ್ಜಿ ಸಲ್ಲಿಸಿದ್ದರು. ಅದನ್ನು ಮಂಜೂರು ಮಾಡಲಾಗಿತ್ತು. ರಜೆ ಮುಕ್ತಾಯಗೊಂಡ ನಂತರ ಅವರು ಮತ್ತೆ 180 ದಿನಗಳ ರಜೆಯನ್ನು ದಿನಾಂಕ: 31.03.84 ರಿಂದ ಮಂಜೂರು ಮಾಡಲು ಕೋರಿದ್ದರು. ಅಂತಿಮವಾಗಿ ದಿನಾಂಕ: 12.10.84ರವರೆಗೆ ಸೇವಾ ನಿರತರಾಗಿದ್ದರು. ದಿನಾಂಕ: 15.10.84ರಿಂದ 12.01.85 ರವರೆಗೆ ಯಾವುದೇ ರಜೆ ಮಂಜೂರಾಗಿರಲಿಲ್ಲ. ಆದಾಗ್ಯೂ ದಿನಾಂಕ: 13.10.84 ರಿಂದ ಅನಧಿಕೃತವಾಗಿ ಗೈರುಹಾಜರಾಗಿದ್ದರು. 1957ರ ಕೆಸಿಎಸ್(ಸಿಸಿಎ) ನಿಯಮಾವಳಿಯ 11ನೇ ನಿಯಮದಡಿ ಅವರಿಗೆ ನೋಟೀಸ್ ನೀಡಿ ದೋಷಾರೋಪಣೆಯನ್ನು ಮತ್ತು ಅದನ್ನು ಬೆಂಬಲಿಸುವ ದುರ್ನಡತೆ ಅಥವಾ ದುರ್ವ್ಯವಹಾರದ ಹೇಳಿಕೆಯನ್ನು ಹಾಗೂ ಸಾಕ್ಷಿದಾರರ ಮತ್ತು ದಾಖಲೆಗಳ ಪಟ್ಟಿಗಳನ್ನು 1 ರಿಂದ 4ನೇ ಅನುಬಂಧದಲ್ಲಿ ರೂಪಿಸಲಾಗಿತ್ತು. ಅದಕ್ಕೆ ಯಾವುದೇ ಪ್ರತಿಕ್ರಿಯೆ ಇರಲಿಲ್ಲ. ಆದ್ದರಿಂದ ಪ್ರಜಾವಾಣಿ ಪತ್ರಿಕೆಯಲ್ಲಿ ಪ್ರಕಟಿಸಲಾಗಿತ್ತು. ನಂತರ ದಿನಾಂಕ: 03.12.90ರ ಸರ್ಕಾರಿ ಆದೇಶದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದ ಆಡಳಿತಾಧಿಕಾರಿಯವರನ್ನು ಮಂಡನಾಧಿಕಾರಿಯನ್ನಾಗಿ 11(2) ಮತ್ತು 11(5)(ಸಿ) ನಿಯಮದಡಿ ನೇಮಿಸಲಾಗಿತ್ತು. ನಂತರ ದಿನಾಂಕ: 25.04.94ರ ನೋಟೀಸ್‌ನಲ್ಲಿ ಮತ್ತೊಮ್ಮೆ ದೋಷಾರೋಪಣೆಯನ್ನು ರೂಪಿಸಲಾಗಿತ್ತು. ಅದಕ್ಕೂ ಅವರು ಸ್ಪಂದಿಸಲಿಲ್ಲ. ನಂತರ 16.09.2000ದ ಸರ್ಕಾರಿ ಆದೇಶದಲ್ಲಿ ನಿವೃತ್ತ ನ್ಯಾಯಾದೀಶ ಶ್ರೀ ಎಸ್. ಇಂಧೂದರ ಮತ್ತು ವೈದ್ಯಕೀಯ ಶಿಕ್ಷಣ ಉಪನಿರ್ದೇಶಕ-1 ರವರುಗಳನ್ನು ಸದರಿ 11(2) ಮತ್ತು (5)(ಸಿ) ನಿಯಮದಡಿ ವಿಚಾರಣಾ ಪ್ರಾಧಿಕಾರ ಮತ್ತು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು. ದಿನಾಂಕ: 14.08.2001ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸಲ್ಲಿಸಲಾಗಿದೆ. ವಿಚಾರಣಾ ವರದಿಯಲ್ಲಿನ ಮುಖ್ಯಾಂಶ ಈ ಮುಂದಿನಂತಿದೆ.

2. ದಿನಾಂಕ: 15.10.84 ರಿಂದ 12.01.85 ರವರೆಗೆ ಮತ್ತು 13.01.95 ಮತ್ತು 14.01.95ರಂದು ರಜೆಯನ್ನು ಮತ್ತು ಎರಡು ದಿನಗಳ ಸಾರ್ವತ್ರಿಕ ರಜೆಗಳನ್ನು ಉಪಯೋಗಿಸಿಕೊಳ್ಳಲು ಅರ್ಜಿಸಲ್ಲಿಸಿದ್ದರು. ಅದು ಮಂಜೂರಾಗಿರಲಿಲ್ಲ. ದಿನಾಂಕ: 25.05.85ರಂದು ಕಳುಹಿಸಿದ್ದ ಮರುಕರೆ ನೋಟೀಸ್ Vacant Home ಎಂಬ ಷರಾದೊಂದಿಗೆ ಹಿಂತಿರುಗಿತು. ದಿನಾಂಕ: 07.07.97ರಂದು ಆಪಾದಿತರು ಕೆಲಸಕ್ಕೆ ತೆಗೆದುಕೊಳ್ಳುವಂತೆ ಅರ್ಜಿಯನ್ನು ಸಲ್ಲಿಸಿದ್ದರು. ಆ ಸಂದರ್ಭದಲ್ಲಿ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಲಾಗಿತ್ತು. ಅವರು ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದರು. ಈ ಮಧ್ಯೆ ಬಿಎಂಸಿಯಲ್ಲಿ ಅವರನ್ನು ಸಹಾಯಕ ಪ್ರಾಧ್ಯಾಪಕರನ್ನಾಗಿ ನೇಮಿಸಲಾಗಿತ್ತು. ವಿಚಾರಣೆಯಲ್ಲಿ ಡಾ: ಶೀಲಾ ಡಿ ನಾಯಕ್ ರವರ

ಹೇಳಿಕೆಯು ದಾಖಲೆಗಳ ಆಧಾರದ ಮೇಲೆ ಸಾಕ್ಷಿ ನೀಡಿದ್ದಾರೆ. ಅವರು ಗೈರುಹಾಜರಾದ ಅವಧಿಗೆ ದಾಖಲೆಗಳನ್ನು ಗುರುತಿಸಿ ಆಪಾದಿತರಿಗೆ ಕಳುಹಿಸಲಾಗಿದ್ದ ಮೆಮೋಗಳು ಜಾರಿಯಾಗಿದೆಯೇ ಅಥವಾ ಇಲ್ಲವೋ ಎಂಬುದನ್ನು ಹೇಳಲು ಸಾಧ್ಯವಾಗುವುದಿಲ್ಲವೆಂದು ಮತ್ತು ಯಾವುದೇ ದಾಖಲೆಗಳು ಲಭ್ಯವಿಲ್ಲವೆಂದು ತಿಳಿಸಿದ್ದಾರೆ. ದಿನಾಂಕ: 29.09.99ರ ಆದೇಶದ ಪ್ರಕಾರ ಅವರು ಕೆಲಸದ ಮೇಲೆ ಇರುವುದು ಗಮನಕ್ಕೆ ಬಂದಿತ್ತೆಂದು ತಿಳಿಸಿದ್ದಾರೆ. ಪ್ರಾಂಶುಪಾಲರಿಗೆ 90 ದಿನಗಳ ರಜೆ ಮಂಜೂರು ಮಾಡಲು ಅಧಿಕಾರವಿದ್ದು ಅದನ್ನು ಮಂಜೂರು ಮಾಡಲಾಗಿತ್ತೇ ಅಥವಾ ಇಲ್ಲವೇ ಎಂಬುದನ್ನು ತಿಳಿಸಲು ಸಾಧ್ಯವಿಲ್ಲ ಎಂದು ತಿಳಿಸಿದ್ದಾರೆ. ಆಪಾದಿತರು ದಿನಾಂಕ: 13.10.84 ರಿಂದ ಇಲ್ಲಿಯವರೆವಿಗೆ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿದ್ದಾರೆಂದು ದೋಷಾರೋಪಣೆಯನ್ನು ಹೊರಿಸಲಾಗಿತ್ತು. 90 ದಿನಗಳ ರಜೆ ಮಂಜೂರಾಗಿತ್ತೆಂದು ಪ್ರಾಂಶುಪಾಲರು ಸಾಕ್ಷ್ಯ ಹೇಳಿದ್ದಾರೆ. ದಿನಾಂಕ: 25.05.85ರ ಮಮೋ ಜಾರಿಯಾಗಿದೆಯೇ, ಅಥವಾ ಇಲ್ಲವೇ ಎಂಬುದರ ಮೇಲೆ ಸಾಕ್ಷ್ಯ ಇಲ್ಲ. ಆಪಾದಿತರ ಸಾಕ್ಷ್ಯ ಹೇಳಿಕೆಯಲ್ಲಿ ರಜೆ ಮಂಜೂರಾತಿ ಬಗ್ಗೆ ಯಾವ ಉತ್ತರವೂ ತಲುಪಿಲ್ಲವೆಂದು ತಿಳಿಸಿದ್ದಾರೆ. ಪ್ರಾಂಶುಪಾಲರ ಮೌಖಿಕ ಅನುಮತಿ ಮೇರೆಗೆ ದಿನಾಂಕ: 15.10.84 ರಿಂದ 12.01.85 ರವರೆಗಿನ ರಜೆ ಮತ್ತು ಎರಡು ದಿನಗಳ ಮುಂದುವರೆದ ಸಾರ್ವತ್ರಿಕ ರಜೆಗಳನ್ನು ಉಪಯೋಗಿಸಿಕೊಳ್ಳಲು ಅರ್ಜಿ ಸಲ್ಲಿಸಿದ್ದಾಗಿ ತಿಳಿಸಿದ್ದಾರೆ. ಈ ಅವಧಿಯಲ್ಲಿ ಕೌಟುಂಬಿಕ ಸಮಸ್ಯೆಗಳಿಂದಾಗಿ ಊರಿಗೆ ಹೋಗಬೇಕಾಯಿತೆಂದು ನಿಲುವನ್ನು ತೆಗೆದುಕೊಂಡಿದ್ದಾರೆ. ಈ ಪ್ರಕರಣದ ಸಾಕ್ಷ್ಯಾಧಾರಗಳನ್ನು ಗಮನಿಸಿದ್ದಲ್ಲಿ ಅವರ ನಿಲುವನ್ನು ತಿರಸ್ಕರಿಸಲು ಯಾವ ಕಾರಣಗಳಿಲ್ಲ. ದಿನಾಂಕ: 13.10.84 ರಿಂದ ಅವರು ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಾಗಿದ್ದಾರೆ ಎಂಬ ಆರೋಪ ಸಮಂಜಸವಾಗಿಲ್ಲ. ಕೌಟುಂಬಿಕ ಸಮಸ್ಯೆಗಳು ಉಲ್ಬಣಗೊಂಡಿದ್ದರಿಂದ ನ್ಯಾಯಾಲಯದಲ್ಲಿ ದಾವೆಯನ್ನು ಎದುರಿಸಬೇಕಾಗಿದ್ದುದರಿಂದ ಅದರಲ್ಲಿ ಮಗ್ನರಾಗಿದ್ದಾಗಿ ತಿಳಿಸಿದ್ದಾರೆ. ಆ ಅವಧಿಯಲ್ಲಿ ಅವರ ತಾಯಿಯವರ ಆರೋಗ್ಯ ಸರಿಯಿಲ್ಲದಿದುದ್ದರಿಂದ ಶಸ್ತ್ರ ಚಿಕಿತ್ಸೆ ಮಾಡಿಸಿ ಅವರ ತಂದೆ ಆರೋಗ್ಯವೂ ಕೆಟ್ಟು 1996ರ ಸೆಪ್ಟೆಂಬರ್‌ನಲ್ಲಿ ಮೃತಪಟ್ಟಿದ್ದರಿಂದ ಮಾನಸಿಕಗೊಂದಲಗಳಲ್ಲಿದ್ದುದಾಗಿ ತಿಳಿಸಿದ್ದಾರೆ. ಆಗಿಂದಾಗ್ಗೆ ರಜೆಯನ್ನು ನೀಡಿ ಬಿಡಿಸಲಾಗದ ಕೌಟುಂಬಿಕ ಸಮಸ್ಯೆಗಳಿಂದ ರಜೆ ಅರ್ಜಿಗಳ ಬಗ್ಗೆ ಹೆಚ್ಚಿನ ಗಮನ ಕೊಡಲು ಆಗಲಿಲ್ಲವೆಂದು ತಿಳಿಸಿದ್ದಾರೆ. ಅವುಗಳನ್ನು ಸಂಬಂಧಪಟ್ಟ ಕಛೇರಿಗೆ ಕೊಟ್ಟಿರುವ ಬಗ್ಗೆ ಕಛೇರಿ ಮುದ್ರೆ ಇರುವುದು ಕಂಡು ಬರುತ್ತದೆ. ಕಿವಿ ಮೂಗು ಮತ್ತು ಗಂಟಲು ವಿಭಾಗದ ಮುಖ್ಯಸ್ಥರು ಷರಾದೊಂದಿಗೆ ಮೇಲಧಿಕಾರಿಗಳಿಗೆ ಸೂಕ್ತ ಕ್ರಮಕ್ಕಾಗಿ ಕಳುಹಿಸಿರುವುದು ಕಂಡುಬರುತ್ತದೆ. ಮಂಡನಾಧಿಕಾರಿಗಳು ವಾದವನ್ನು ಮಂಡಿಸುವ ಸಮಯದಲ್ಲಿ ಆಪಾದಿತರು ಬಹಳಕಾಲ ಗೈರುಹಾಜರಾಗಿರುವುದನ್ನು ಗಮನಿಸಿದರೆ ಅವರು ವಿದೇಶಕ್ಕೆ ಹೋಗಿರಬಹುದಾದ ಸಾಕ್ಷಧಾರವಿಲ್ಲ. ಆಪಾದಿತರು13.10.84 ರಿಂದ ಇಂದಿನವರೆಗೆ ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ ಎಂಬ ದೋಷಾರೋಪಣೆ ಮಾಡಿದ್ದರೂ ಅವರು 07.07.97ರಂದೇ ಕೆಲಸಕ್ಕೆ ಹಾಜರಾಗಲು ಅನುಮತಿ ಕೇಳಿ ಅರ್ಜಿ ಕೊಟ್ಟಿದ್ದಾರೆ. ದಿನಾಂಕ: 29.09.97ರಂದು ಕೆಲಸಕ್ಕೆ ಹಾಜರಾಗಲು ಅನುಮತಿಯನ್ನು ಕೊಡಲಾಯಿತು. ದಿನಾಂಕ: 30.09.99 ರಿಂದ ಕರ್ತವ್ಯನಿರತರಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಅವರ ವಿರುದ್ಧದ ದೋಷಾರೋಪಣೆ ಸಾಬೀತಾಗಿಲ್ಲವೆಂದು ಫೈಂಡಿಂಗ್ಸ್ ನೀಡಿದ್ದಾರೆ.

3. ದಿನಾಂಕ: 23.03.2002ರ ಸರ್ಕಾರಿ ಪತ್ರದಲ್ಲಿ ಅವರಿಗೆ ಪಾಸ್‌ಪೋರ್ಟ್ ಪಡೆಯಲು ಅನುಮತಿ ನೀಡಲಾಗಿತ್ತೇ? ನೀಡಿದ್ದರೆ ಮೇಲ್ಕಂಡ ಗೈರುಹಾಜರಿ ಅವಧಿಯಲ್ಲಿ ಗೈರುಹಾಜರಿ ಅವಧಿಯಲ್ಲಿ ಹೊರದೇಶಕ್ಕೆ ಹೋಗಿದ್ದರೆ ಪಾಸ್‌ಪೋರ್ಟ್‌ನಲ್ಲಿ ದಾಖಲೆ ಇದೆಯೇ? ಎಂಬುದನ್ನು ತಿಳಿಸುವಂತೆ ವೈದ್ಯಕೀಯ ಶಿಕ್ಷಣ ನಿರ್ದೇಶಕರಿಗೆ ಸೂಚಿಸಲಾಗಿತ್ತು. ದಿನಾಂಕ: 15.09.2002ರ ಡಾ: ಕೆ.ಜಿ. ವಿಜಯಕುಮಾರ್ ರವರ ಪತ್ರದಲ್ಲಿ ಈ ಕೆಳಕಂಡಂತೆ ತಿಳಿಸಿದ್ದಾರೆ.

"ಪ್ರಸ್ತುತ ನಾನು ಯಾವುದೇ ರೀತಿಯ ಪಾಸ್‌ಪೋರ್ಟನ್ನು ಹೊಂದಿಲ್ಲವೆಂದು ಈ ಮೂಲಕ ತಮಗೆ ತಿಳಿಸಲು ಇಚ್ಛಿಸುತ್ತೇನೆ ಆದ್ದರಿಂದ ನಾನು ಪಾಸ್‌ಪೋರ್ಟ್ ಪ್ರತಿಯನ್ನು ನೀಡುವಲ್ಲಿ ವಿಳಂಬ ಮಾಡಿರುವುದಿಲ್ಲ."

4. ಈ ಪ್ರಕರಣದ ಘಟನೆ ಜರುಗಿ ಈಗಾಗಲೇ 18 ವರ್ಷಗಳು ಮೀರಿದೆ. ಇಲಾಖಾ ವಿಚಾರಣಾ ವರದಿಯು ದಿನಾಂಕ: 18.08.2002ರಂದು ಸ್ವೀಕೃತವಾಗಿದೆ. ಆದ್ದರಿಂದ ವಿಚಾರಣಾ ವರದಿಯನ್ನು ವಿಶ್ಲೇಷಿಸಿ ಕ್ರಮ ತೆಗೆದುಕೊಳ್ಳಲಾಗಿದೆ.

5. ದಿನಾಂಕ: 29.09.99ರ ಅಧಿಸೂಚನೆಯಲ್ಲಿ ಅವರ ಅನಧಿಕೃತ ಗೈರುಹಾಜರಿ ಸಂಬಂಧ ಶಿಸ್ತುಕ್ರಮವನ್ನು ಬಾಕಿ ಇಟ್ಟು ಕರ್ತವ್ಯಕ್ಕೆ ತೆಗೆದುಕೊಂಡು ಬಿಎಂಸಿಯ ಇಎನ್‌ಟಿ ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ನೇಮಿಸಲಾಗಿದೆ. ಅವರನ್ನು ದೋಷಮುಕ್ತಗೊಳಿಸಲು ಯಾವುದೇ ಸ್ವರೂಪದಿಂದ ಅದು ಅನುವಾಗುವುದಿಲ್ಲ. ವಿಚಾರಣೆಯಲ್ಲಿ ಅವರು ತಿಳಿಸಿರುವ ನಿಡಿ 1 ರಿಂದ ನಿಡಿ 5ನ್ನು ವೀಕ್ಷಿಸಿದಲ್ಲಿ ಒಂದು ಬಿಳಿಹಾಳೆಯಲ್ಲಿ ಅವರ ವಿಳಾಸವನ್ನು ಮೈಸೂರು ವೈದ್ಯಕೀಯ ಕಾಲೇಜಿನ ಇಎನ್‌ಟಿ ಸಹಾಯಕ ಪ್ರಾಧ್ಯಾಪಕರಾಗಿ ದಿನಾಂಕ: 13.01.85 ರಂದು 13.07.88ರಂದು 12.07.90ರಂದು ಮತ್ತು 13.07.92ರಂದು ಅನುಕ್ರಮವಾಗಿ 180 ದಿನಗಳಿಗೆ 3 ವರ್ಷಗಳಿಗೆ 2 ವರ್ಷಗಳಿಗೆ ವಿಸ್ತರಣೆ ಕೋರಿದ್ದಾರೆ. ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸಿಲ್ಲ. ಅವರು ಸೇವೆಯ ಮೇಲೆ ಇಲ್ಲದಿದ್ದಾಗ ಮತ್ತು ರಜೆ ಅವಧಿಯಲ್ಲಿನ ವಿಳಾಸವನ್ನು ನಿಗದಿತ ನಮೂನೆಯಲ್ಲಿ ನೀಡುವುದು ಕಡ್ಡಾಯ. ಅದನ್ನು ನೀಡದೆ ಕಾಲೇಜಿನ ವಿಳಾಸವನ್ನೇ ನೀಡಿರುವುದು ಅಸಮಂಜಸವಾಗಿದೆ. ಎಲ್ಲವೂ ಒಂದೇ ಸ್ವರೂಪದಲ್ಲಿದೆ. ರಜೆ ಅರ್ಜಿಯನ್ನು ನೀಡಿದಾಕ್ಷಣ ರಜೆ ಮಂಜೂರು ಮಾಡಿದಂತಾಗುವುದಿಲ್ಲ. ಅದನ್ನು ಮಂಜೂರು ಮಾಡಿಸಿಕೊಂಡ ನಂತರವೇ ರಜೆ ಉಪಯೋಗಿಸಿಕೊಳ್ಳಬೇಕು. ರೀಕಾಲ್ ನೋಟೀಸ್ ಜಾರಿಯಾಗಿಲ್ಲದಿದ್ದರೂ ಅಥವಾ ರಜೆಯನ್ನು ತಿರಸ್ಕರಿಸದಿದ್ದರೂ ಅವರು ಕರ್ತವ್ಯದ ಮೇಲಿರಲಿಲ್ಲ ಎಂಬುದು ಸ್ಪಷ್ಟವಾಗಿದೆ ಮತ್ತು ದಾಖಲೆಗಳಲ್ಲಿ ಅದು ಪ್ರತಿಬಿಂಬಿಸುತ್ತದೆ. ಅವರು ವರ್ಷಾನುಗಟ್ಟಲೆ ಕೇವಲ ಒಂದು ಬಿಳಿ ಹಾಳೆಯಲ್ಲಿ ರಜೆಗೆ ಅರ್ಜಿ ಸಲ್ಲಿಸಿ ಕರ್ತವ್ಯದಿಂದ ಗೈರುಹಾಜರಾಗುವುದಕ್ಕೆ ಕೆಸಿಎಸ್‌ಆರ್‌ನಲ್ಲಿ ಅವಕಾಶವಿಲ್ಲ. ಅವರು ಸಲ್ಲಿಸಿರುವ ಲಿಖಿತ ರಕ್ಷಣಾ ಹೇಳಿಕೆಯಲ್ಲಿ ಅತ್ಯಧಿಕ ಕೌಟುಂಬಿಕ ಸಮಸ್ಯೆಗಳಿಂದ ಮತ್ತು ಪಿತ್ರಾರ್ಜಿತ ಆಸ್ತಿಯಲ್ಲಿನ ವಿಭಾಗದ ವ್ಯಾಜ್ಯಗಳಿಂದ ಹಾಗೂ ನ್ಯಾಯಾಲಯದ ಮೂಲಕ ಅವುಗಳನ್ನು ಇತ್ಯರ್ಥಪಡಿಸಬೇಕಾಗಿದ್ದುದರಿಂದ ಅಲ್ಲದೆ ಅವರ ತಾಯಿಯವರ ಅನಾರೋಗ್ಯ ಮತ್ತು ಅವರ ತಂದೆಯವರ ನಿಧನ ಹಾಗೂ ಇನ್ನಿತರ ಕಾರಣಗಳಿಂದ ಅವರು ಕರ್ತವ್ಯಕ್ಕೆ ಹಾಜರಾಗಲಿಲ್ಲವೆಂದೂ ಮತ್ತು ಕಡೇಪಕ್ಷ ವೃತ್ತ ಪತ್ರಿಕೆಗಳನ್ನೂ ಓದಲೂ ಸಹ ಸಾಧ್ಯವಿರಲಿಲ್ಲವೆಂದು ತಿಳಿಸಿದ್ದಾರೆ. ತಂದೆಯವರ ನಿಧನದ ನಂತರ ಅವರ ಜವಾಬ್ದಾರಿಯನ್ನು ಅರಿತು ಅವರು ಕರ್ತವ್ಯಕ್ಕೆ ಸೇರಲು ನಿರ್ಧರಿಸಿರುವುದಾಗಿ ತಿಳಿಸಿದ್ದಾರೆ. ಅಲ್ಲದೆ ದಿನಾಂಕ:25.05.85ರ ರೀಕಾಲ್ ಮೆಮೋ ದಿನಾಂಕ: 31.05.85ರಂದು ರವಾನೆಯಾಗಿದೆ. ಅದನ್ನು ಅವರ ಮೈಸೂರಿನ ಗೃಹವಿಳಾಸಕ್ಕೆ ಕಳುಹಿಸಲಾಗಿತ್ತು. ಪ್ರಖ್ಯಾತ ಪ್ರಜಾವಾಣಿ ಪತ್ರಿಕೆಯಲ್ಲೂ ಪ್ರಕಟಿಸಲಾಗಿತ್ತು. ಅದಕ್ಕೂ ಸಹ ಪ್ರತಿಕ್ರಿಯಿಸಿಲ್ಲ ಯಾವುದೇ ರಜೆ ಪಡೆಯದೆ ಕರ್ತವ್ಯದಿಂದ ಗೈರುಹಾಜರಾಗುವುದು ದುರ್ನಡತೆಯಾಗಿದೆ. ಪ್ರಸ್ತುತ ಪ್ರಕರಣದಲ್ಲಿ ಅವರು 14 ವರ್ಷಗಳಿಗೂ ಮೀರಿ ಕರ್ತವ್ಯದಿಂದ ಗೈರುಹಾಜರಾಗಿದ್ದಾರೆ. ಕೆಸಿಎಸ್‌ಆರ್‌ನ 175ನೇ ನಿಯಮದಡಿ ರಜೆ ಅರ್ಜಿಯನ್ನು ನಿಗದಿತ ನಮೂನೆಯಲ್ಲಿಯೇ ಸಲ್ಲಿಸಬೇಕು. 107ನೇ ನಿಯಮದಡಿ ರಜೆಯನ್ನು ಹಕ್ಕೆಂದು ಪರಿಗಣಿಸತಕ್ಕದ್ದಲ್ಲ. ರಜೆ ಮಂಜೂರು ಮಾಡುವುದು ತಿರಸ್ಕರಿಸಲು ಸಕ್ಷಮ ಪ್ರಾಧಿಕಾರಕ್ಕೆ ಅಧಿಕಾರವಿದೆ. ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ ಕರ್ತವ್ಯದಿಂದ ಗೈರುಹಾಜರಾದಲ್ಲಿ 106-ಎ ನಿಯಮದಡಿ ಅದನ್ನು ಭತ್ಯೆ ರಹಿತ ರಜೆ ಎಂದು ಪರಿಗಣಿಸಿ ಅವರ ವಿರುದ್ಧ ಶಿಸ್ತಿನ ಕ್ರಮಕೈಗೊಳ್ಳಲೂ ಮತ್ತು 108ನೇ

ನಿಯಮದಡಿ ಅಂತಹ ಗೈರುಹಾಜರಿ ಅವಧಿಯು 4 ತಿಂಗಳು ಮೀರಿದ್ದಲ್ಲಿ ಸೇವೆಯಿಂದ ವಜಾ ಮಾಡುವ ಅಥವಾ ತೆಗೆದುಹಾಕುವ ದಂಡನೆಯನ್ನು ಪ್ರಕ್ರಿಯೆ ಪಾಲಿಸಿದ ನಂತರ ವಿಧಿಸಬಹುದಾಗಿದೆ. ದಿನಾಂಕ: 28.02.94 ಸಂಖ್ಯೆ ಸಿಆಸುಇ 9 ಎಸ್‌ಡಿಇ 94ರ ಅಧಿಕೃತ ಜ್ಞಾಪನದ 2ನೇ ಮಾರ್ಗದರ್ಶಿಯ ಪ್ರಕಾರ ಮುಂಚಿತವಾಗಿ ರಜೆ ಪಡೆಯದೆ ನೌಕರರು ಗೈರುಹಾಜರಾದರೆ ಶಿಸ್ತು ಪ್ರಾಧಿಕಾರವು ಕೂಡಲೇ ಅವರಿಗೆ ಕರ್ತವ್ಯಕ್ಕೆ ಹಾಜರಾಗಲು ನೋಟೀಸ್ ನೀಡಬೇಕು. ಆ ನೋಟೀಸಿಗೆ ಸ್ಪಂದಿಸದಿದ್ದಲ್ಲಿ ನೌಕರರು ಸೂಚನೆ ರಹಿತವಾಗಿ ಗೈರುಹಾಜರಾಗಿರುವುದನ್ನು ಮುಂದುವರೆಸಿದ್ದಲ್ಲಿ ಅಂತಹ ನೌಕರರು ತಲೆಮರೆಸಿಕೊಂಡಿದ್ದಾರೆಂದು ಪರಿಗಣಿಸಿ ಸಿಸಿಎ ನಿಯಮಾವಳಿಯ 14ನೇ ನಿಯಮದ ವಿಶೇಷ ವಿಧಾನಗಳನ್ನು ಅನುಸರಿಸಬೇಕು.

6. ಮೇಲ್ಕಂಡ ಹಿನ್ನೆಲೆಯಲ್ಲಿ ವಿಚಾರಣಾ ವರದಿಯ ಅಂಗೀರಾರ್ಹವಲ್ಲ. ಅದನ್ನು ತಿರಸ್ಕರಿಸಿ ಸಿಸಿಎ ನಿಯಮಾವಳಿಯ 11-ಎ ನಿಯಮದಡಿ ಮೇಲ್ಕಂಡ ಸನ್ನಿವೇಶ ವಾಸ್ತವಿಕತೆಯ ಹಿನ್ನೆಲೆಯಲ್ಲಿ ಅವರ ದೀರ್ಘಾವಧಿಯ ಅನಧಿಕೃತ ಗೈರುಹಾಜರಿ ಸಕಲಕೋನಗಳಿಂದ ಸಾಭಿತಾಗಿದೆ ಎಂದು ಪರಿಗಣಿಸಿ ದಿನಾಂಕ:14.09.2001 ಸಂಖ್ಯೆ: ಸಿಆಸುಇ 18 ಸೇಇವಿ 2001 ಸುತ್ತೋಲೆಯಲ್ಲಿ ವಿಧಿಸಬಹುದಾದ ದಂಡನೆಯನ್ನು ವಿಧಿಸಬೇಕಾಗುತ್ತದೆ.

7. ಇಎನ್‌ಟಿ ಸಹಾಯಕ ಪ್ರಾಧ್ಯಾಪಕರಾದ ಡಾ: ಕೆ.ಜಿ. ವಿಜಯಕುಮಾರ್‌ರವರು ದಿನಾಂಕ:13.10.84 ರಿಂದ 29.09.99 ರವರೆಗೆ ಅನಧಿಕೃತ ಗೈರುಹಾಜರಾಗಿದ್ದರು. ಅವರ ಅನಧಿಕೃತ ಗೈರುಹಾಜರಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಯನ್ನು ಕೈಗೊಂಡ ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿತ್ತು. ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ಡಾ: ಕೆ.ಜಿ. ವಿಜಯಕುಮಾರ್ ರವರ ಮೇಲೆ ಹೊರಿಸಲಾಗಿರುವ ದೋಷಾರೋಪಣೆಯು ರುಜುವಾತಾಗಿಲ್ಲವೆಂದು ತೀರ್ಮಾನಿಸಿರುತ್ತಾರೆ. ಅವರ ವರದಿಯನ್ನು ಪರಿಶೀಲಿಸಲಾಗಿದೆ ಮತ್ತು ತಿರಸ್ಕರಿಸಲಾಗಿದೆ. ಅದಕ್ಕಾಗಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 361 ಎಂಎಂಸಿ 1985 ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ, 2006**

8. ಮೈಸೂರು ವೈದ್ಯಕೀಯ ಕಾಲೇಜಿನ ಕಿವಿ ಮೂಗು ಗಂಟಲು ಶಾಸ್ತ್ರ ಸಹಾಯಕ ಪ್ರಾಧ್ಯಾಪಕರಾದ ಡಾ: ಕೆ.ಜಿ. ವಿಜಯಕುಮಾರ್‌ರವರು ದಿನಾಂಕ: 31.01.2004 ರಂದು ಸೇವೆಯಿಂದ ವಯೋನಿವೃತ್ತರಾಗಿರುವುದರಿಂದ ಕೆಸಿಎಸ್‌ಆರ್ ನಿಯಮ 214(1)(ಎ) ನಿಯಮದಡಿ ಅವರ ನಿವೃತ್ತಿವೇತನವನ್ನು ಶಾಶ್ವತವಾಗಿ ಕನಿಷ್ಟ ಮಟ್ಟಕ್ಕೆ ಇಳಿಸಲಾಗಿದೆ ಮತ್ತು ಅವರಿಗೆ ಸಲ್ಲುವಂತಹ ಡಿಸಿಆರ್‌ಜಿ ಯು ಪೂರ್ತಿಯಾಗಿ ಕಡಿತಗೊಳಿಸಲಾಗಿದೆ. ಈ ಆದೇಶವನ್ನು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

ಪಿ.ಆರ್.597

**ವಿಷಯ:** ಡಾ: ಬಿ. ಗಣರಾಜ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಗುಡಗೇರಿ, ಕುಂದಗೋಳ ತಾಲ್ಲೂಕು, ಧಾರವಾಡ ಜಿಲ್ಲೆ ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಪಿಜಿ ಬೆಂ.ವಿ.ದಾ.:05: 2005-06 ದಿನಾಂಕ: 08.12.2005.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪ್ರಸ್ತಾವನೆಯಲ್ಲಿ ಡಾ: ಬಿ.ಗಣರಾಜ, ಇವರು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ದಿನಾಂಕ: 04.09.2002ರಂದು ಸರ್ಕಾರಿ ಸೇವೆಗೆ ಸೇರಿದ್ದು, ಪ್ರಾಥಮಿಕ ಆರೋಗ್ಯ ಕೇಂದ್ರ, ಗುಡಗೇರಿ, ಕುಂದಗೋಳ ತಾಲ್ಲೂಕು, ಧಾರವಾಡ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದರು. ಸದರಿ ವೈದ್ಯರು ದಿನಾಂಕ:14.01.2005 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಧಾರವಾಡ ಇವರು ಅನೇಕ ಬಾರಿ ನೋಟೀಸು ನೀಡಿದ್ದರೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಆದ್ದರಿಂದ ಸದರಿ ವೈದ್ಯರು ಅನಧಿಕೃತ ಗೈರುಹಾಜರಾಗಿ ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಕರ್ತವ್ಯ ಲೋಪ ಎಸಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಾವಳಿ 1977ರ ಉಪ ನಿಯಮ 6(1)2ರ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಅದರಂತೆ ಪರಿಶೀಲಿಸಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 44 ಹೆಚ್‌ಎಸ್‌ಹೆಚ್ 2006, ಬೆಂಗಳೂರು, ದಿನಾಂಕ:22ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಬಿ. ಗಣರಾಜ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಗುಡಗೇರಿ, ಕುಂದಗೋಳ ತಾಲ್ಲೂಕು, ಧಾರವಾಡ ಜಿಲ್ಲೆ ಇವರು ದಿನಾಂಕ:14.01.2005 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ:14.01.2005 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6(1)2ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1).

ಪಿ.ಆರ್.598

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ಕೊಪ್ಪಳ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ ಹಾಗೂ ಅದರ ನಾಲ್ಕು ಉಪ ವಿಭಾಗಗಳ ಉಗ್ರಾಣ ದಾಸ್ತಾನಿನ ಕೊರತೆಗೆ ಸಂಬಂಧಿಸಿದ ಅಧಿಕಾರಿ/ ನೌಕರರುಗಳ ಮೇಲಿನ ಆರೋಪಗಳ ಬಗ್ಗೆ ವಿವರವಾದ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಿಸುವ ಬಗ್ಗೆ- ಆದೇಶ.

**ಓದಲಾಗಿದೆ:**1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರ ಪತ್ರ ಸಂಖ್ಯೆ: ಜಿಪಂಕೊ/ ಸಿಸಿಎ/ 10/ 04-05/ ದಿನಾಂಕ: 08.10.2004.

2. ಸಾದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಗ್ರಾ.ಅ.ಪ: 38: ಇಎನ್‌ಕ್ಯೂ:04, ದಿನಾಂಕ: 27.11.2004.
3. ಆಪಾದಿತ ಅಧಿಕಾರಿ/ ನೌಕರರುಗಳು ಸಲ್ಲಿಸಿದ ಲಿಖಿತ ಉತ್ತರಗಳ ದಿನಾಂಕ: 15.01.2005 (ಪುಟ-425)
4. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರ ಪತ್ರ ಸಂಖ್ಯೆ: ಜಿಪಂಕೊ/ ಸಿಸಿಎ/ 10/04-05/ ದಿನಾಂಕ: 24.09.2005.
5. ಕಾರಣ ಕೇಳುವ ನೋಟೀಸ್ ಸಂಖ್ಯೆ: ಗ್ರಾಅಪ:38: ಇಎನ್‌ಕ್ಯೂ:04, ದಿನಾಂಕ:28.10.2005.
6. ಆಪಾದಿತ ಅಧಿಕಾರಿ/ ನೌಕರರುಗಳು ವಿವಿಧ ದಿನಾಂಕಗಳಲ್ಲಿ ಸಲ್ಲಿಸಿದ ಲಿಖಿತ ಉತ್ತರಗಳು.
7. ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 38 ಇಎನ್‌ಕ್ಯೂ 04, ದಿನಾಂಕ: 15.02.2006.
8. ಶ್ರೀ ಎಸ್.ವಿ. ಪಾಟೀಲ್, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಇವರ ಮನವಿ ದಿನಾಂಕ: 24.02.2006.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 08.10.2004ರಲ್ಲಿ ಕೊಪ್ಪಳ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ ಹಾಗೂ ಅದರ ನಾಲ್ಕು ಉಪ ವಿಭಾಗಗಳಲ್ಲಿ ದಿನಾಂಕ: 01.06.87 ರಿಂದ 31.03.2002 ರವರೆಗಿನ ಅವಧಿಯಲ್ಲಿ ಉಗ್ರಾಣ ದಾಸ್ತಾನಿನಲ್ಲಿ ನಡೆದಿರುವ ಉಗ್ರಾಣ ಸಾಮಗ್ರಿಗಳ ಕೊರತೆಯಿಂದಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗಲು ಕಾರಣರಾಗಿರುವ ಈ ಕೆಳಕಂಡ ಅಧಿಕಾರಿ/ ನೌಕರರುಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ದೋಷಾರೋಪಣಾ ಪಟ್ಟಿ 1 ರಿಂದ 4ನ್ನು ಮತ್ತು ಇದಕ್ಕೆ ಸಂಬಂಧಿಸಿದ ದಾಖಲೆಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು.

**ಶ್ರೀಯುತರಾದ (ನಿವೃತ್ತಿ ಹೊಂದಿರುವ ಅಧಿಕಾರಿಗಳು)**

| | | |
|---|---|---|
| 1) | ಎಸ್.ಎನ್. ಹುಸೇನಿ, | ಅಂದಿನ ಸಕಾಇಂ, ಜಿಪಂಇಂಉವಿ, ಕೊಪ್ಪಳ. |
| 2) | ಹೆಚ್.ಜಿ. ರಾಮಯ್ಯ, | ಅಂದಿನ ಸಕಾಇಂ, ಜಿಪಂಇಂಉವಿ, ಕೊಪ್ಪಳ. |
| 3) | ಎಸ್. ತಿಮ್ಮಪ್ಪ, | ಅಂದಿನ ಸಕಾಇಂ, ಜಿಪಂಇಂಉವಿ, ಕುಷ್ಟಗಿ. |
| 4) | ಹೆಚ್.ಎಸ್. ಸೋಮರೆಡ್ಡಿ, | ಅಂದಿನ ಸಕಾಇಂ, ಜಿಪಂಇಂಉವಿ, ಕೊಪ್ಪಳ |
| 5) | ಎಸ್.ಎ. ಸಜ್ಜನರ, | ಅಂದಿನ ಸಕಾಇಂ, ಜಿಪಂಇಂಉವಿ, ಕೊಪ್ಪಳ. |
| 6) | ಗೌಸ್ ಮೊಹಿನುದ್ದೀನ್, | ಅಂದಿನ ಲೆಕ್ಕ ಅಧೀಕ್ಷಕರು. |

**ಶ್ರೀಯುತರಾದ ಸೇವೆಯಲ್ಲಿರುವ ಅಧಿಕಾರಿ/ ನೌಕರರು**

1. ಕೆ.ಎನ್. ಚಂದ್ರಶೇಖರ್, ಅಂದಿನ ಲೆಕ್ಕಾಧೀಕ್ಷಕರು, ಜಿಪಂಇಂವಿ, ಕೊಪ್ಪಳ. (ಪ್ರಸ್ತುತ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಬೆಂಗಳೂರು)
2. ದೇವೇಂದ್ರಪ್ಪ ದೇಸಾಯಿ, ಅಂದಿನ ಪ್ರಭಾರ ಲೆಕ್ಕಾಧೀಕ್ಷಕರು, (ಪ್ರಸ್ತುತ ಜಿಪಂಇಂವಿ, ಕೊಪ್ಪಳದಲ್ಲಿ ಪ್ರದಸ)
3. ಎಂ. ಪಂಪಾಪತಿ, ಅಂದಿನ ಸಕಾಇಂ, ಜಿಪಂಇಂಉವಿ, ಕುಷ್ಟಗಿ (ಪ್ರಸ್ತುತ ಜಿಪಂಇಂಉವಿ, ಸಿಂಧನೂರು)
4. ಬಿ.ವಿ. ಬಳಲೂರ, ಅಂದಿನ ಉಗ್ರಾಣಪಾಲಕರು, ಜಿಪಂಇಂವಿ, ಕೊಪ್ಪಳ (ಪ್ರಸ್ತುತ ಜಿಎಲ್‌ಬಿಸಿ-ಉವಿ, ಕಾತರಕಿ, ಮುಧೋಳ ತಾ.)
5. ಈಶ್ವರ ಹತ್ತಿ, ಅಂದಿನ ಉಗ್ರಾಣಪಾಲಕರು, ಜಿಪಂಇಂವಿ, ಕೊಪ್ಪಳ (ಪ್ರಸ್ತುತ ಜಿಪಂಇಂವಿ, ಗದಗ್)
6. ಬಿ.ವಿ. ಹಿತ್ತಲಮನಿ, ಅಂದಿನ ದ್ವಿದಸ (ಪ್ರಸ್ತುತ ಜಿಪಂಇಂಉವಿ, ಕೊಪ್ಪಳದಲ್ಲಿ ಪ್ರದಸ)
7. ವಿ.ಜಿ. ಕೊಳ್ಳಪ್ಪನವರ ಅಂದಿನ ದ್ವಿದಸ (ಪ್ರಸ್ತುತ ಜಿಪಂಇಂವಿ, ಯಲಬುರ್ಗಾ)
8. ತಿರುಮಲರಾವ್, ಅಂದಿನ ದ್ವಿದಸ, ಜಿಪಂಇಂವಿ, ಕೊಪ್ಪಳ.
9. ಎಂ.ಹೆಚ್. ಜಾಗೀರದಾರ್, ಅಂದಿನ ಉಗ್ರಾಣ ಸಹಾಯಕರು, (ಪ್ರಸ್ತುತ ಕಂದಾಯ ಇಲಾಖೆ, ಯಲಬುರ್ಗಾದ ಬೆಳಕಲ್ ಗ್ರಾಮದಲ್ಲಿ ಗ್ರಾಮ ಲೆಕ್ಕಿಗ)
10. ಮಾರ್ಟಿನ್, ಅಂದಿನ ಉಗ್ರಾಣಸಹಾಯಕರು, (ಪ್ರಸ್ತುತ ಜಿಪಂಇಂಉವಿ, ಗಂಗಾವತಿ)
11. ವಲಿಬಾ, ಅಂದಿನ ಉಗ್ರಾಣ ಸಹಾಯಕರು, (ಪ್ರಸ್ತುತ ಜಿಪಂಇಂಉವಿ, ಕೊಪ್ಪಳ)

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಅವರ ಮೇಲಿನ ಆರೋಪಗಳ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 27.11.2004ರಲ್ಲಿ ಮೊದಲು ಸಾದಾ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ, ಅವರುಗಳಿಂದ ಸ್ವೀಕೃತಿ ಪಡೆದು ಸಲ್ಲಿಸುವಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರಿಗೆ ತಿಳಿಸಲಾಗಿತ್ತು. ಅದರಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರು ಸದರಿ ಅಧಿಕಾರಿ/ ನೌಕರರುಗಳಿಗೆ ಜಾರಿ ಮಾಡಿದ ಸಾದಾ ಕಾರಣ ಕೇಳುವ ನೋಟಿಸಿಗೆ ಅವರುಗಳು ನೀಡಿದ ಲಿಖಿತ ಉತ್ತರಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ: 15.01.2005ರಲ್ಲಿ ಸಲ್ಲಿಸಿದ್ದರು. ಸದರಿ ಲಿಖಿತ ಹೇಳಿಕೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಸದರಿ ಉಗ್ರಾಣ ಸಾಮಗ್ರಿಗಳ ಕೊರತೆಗೆ ಸಂಬಂಧಿಸಿದಂತೆ ಸದರಿ ಇಂಜಿನಿಯರಿಂಗ್ ವಿಭಾಗದಲ್ಲಿನ ಮೂಲ ದಾಖಲಾತಿಗಳೊಂದಿಗೆ ಪರಿಶೀಲಿಸಿ, ಮೇಲ್ನೋಟಕ್ಕೆ ಅವ್ಯವಹಾರವೆಸಗಿರುವುದು ಕಂಡುಬಂದಲ್ಲಿ ಅಂತಹವರ ವಿರುದ್ಧ ತಕ್ಷಣ ಶಿಸ್ತು ಕ್ರಮ ಕೈಗೊಳ್ಳಲು ಆರೋಪ ಪಟ್ಟಿಯೊಂದಿಗೆ ಮೂಲ ದಾಖಲೆಗಳೊಂದಿಗೆ ಪರಿಷ್ಕೃತ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಕೋರಲಾಗಿತ್ತು. ಈ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ: 24.09.2005ರಲ್ಲಿ ಪರಿಷ್ಕೃತ ಪ್ರಸ್ತಾವನೆಯನ್ನು ಸಲ್ಲಿಸಿ, ಶ್ರೀ ಬಿ.ವೈ. ಮಾದನೂರು, ಅಂದಿನ ಲೆಕ್ಕಾಧೀಕ್ಷಕರು, ಪಂರಾಇಂ ವಿಭಾಗ, ಕೊಪ್ಪಳ ಇವರು ಸಹ ಕಾರಣರಾಗಿರುತ್ತಾರೆಂದು ಇವರ ವಿರುದ್ಧ ಸಹ ಶಿಸ್ತು ಕ್ರಮಕೈಗೊಳ್ಳಲು ಕೋರಿದ್ದರು.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, (1) ಶ್ರೀ ಎಸ್.ಎನ್. ಹುಸೇನಿ, ಅಂದಿನ ಸಕಾಇಂ, ಜಿಪಂಇಂಉವಿ, ಕೊಪ್ಪಳ, (2) ಹೆಚ್.ಜಿ. ರಾಮಯ್ಯ, ಅಂದಿನ ಸಕಾಇಂ, ಜಿಪಂಇಂಉವಿ, ಕೊಪ್ಪಳ, (3) ಎಸ್. ತಿಮ್ಮಪ್ಪ, ಅಂದಿನ ಸಕಾಇಂ, ಜಿಪಂಇಂಉವಿ, ಕುಷ್ಟಗಿ, (4) ಹೆಚ್.ಎಸ್. ಸೋಮರೆಡ್ಡಿ, ಅಂದಿನ ಸಕಾಇಂ, ಜಿಪಂಇಂಉವಿ, ಕೊಪ್ಪಳ, ಮತ್ತು (5) ಗೌಸ್ ಮೊಹಿನುದ್ದೀನ್, ಅಂದಿನ ಲೆಕ್ಕ

ಅಧೀಕ್ಷಕರು, ಈ ಅಧಿಕಾರಿ/ ನೌಕರರು ಸೇವೆಯಿಂದ ನಿವೃತ್ತರಾಗಿರುವುದರಿಂದ ಮತ್ತು ಶ್ರೀ ಎಸ್.ಎ. ಸಜ್ಜನರ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್‌ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಕೊಪ್ಪಳ ಇವರು ಈಗಾಗಲೇ ನಿಧನರಾಗಿರುವುದರಿಂದ ಇವರನ್ನು ಹೊರತುಪಡಿಸಿ, ಸೇವೆಯಲ್ಲಿರುವ ಈ ಕೆಳಕಂಡ ಅಧಿಕಾರಿ/ ನೌಕರರ ಮೇಲೆ ನಿಯಮಾನುಸಾರ ಶಿಸ್ತು ಕ್ರಮ ಕೈಗೊಳ್ಳುವ ಕ.ಸ.ಸೇ (ವ.ನಿ.ಅ.) ನಿಯಮ 1957ರ ನಿಯಮ 11 ರನ್ವಯ ಇವರುಗಳಿಗೆ ಇಲಾಖಾ ವಿಚಾರಣೆ ಹೂಡಿ ಮೇಲೆ ಓದಲಾದ ಕ್ರಮ ಸಂ.(5)ರ ದಿನಾಂಕ: 28.10.2005ರಲ್ಲಿ ಕಾರಣ ಕೇಳುವ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿಮಾಡಲಾಗಿತ್ತು.

**ಶ್ರೀಯುತರಾದ ಸೇವೆಯಲ್ಲಿರುವ ಅಧಿಕಾರಿ/ ನೌಕರರು**

1. ಕೆ.ಎನ್. ಚಂದ್ರಶೇಖರ್, ಅಂದಿನ ಲೆಕ್ಕಾಧೀಕ್ಷಕರು, ಜಿಪಂಇಂವಿ, ಕೊಪ್ಪಳ. (ಪ್ರಸ್ತುತ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಬೆಂಗಳೂರು)
2. ದೇವೇಂದ್ರಪ್ಪ ದೇಸಾಯಿ, ಅಂದಿನ ಪ್ರಭಾರಿ ಲೆಕ್ಕಾಧೀಕ್ಷಕರು, (ಪ್ರಸ್ತುತ ಜಿಪಂಇಂವಿ, ಕೊಪ್ಪಳದಲ್ಲಿ ಪ್ರದಸ)
3. ಎಂ. ಪಂಪಾಪತಿ, ಅಂದಿನ ಸಕಾಇಂ, ಜಿಪಂಇಂಉವಿ, ಕುಷ್ಟಗಿ (ಪ್ರಸ್ತುತ ಜಿಪಂಇಂಉವಿ, ಸಿಂಧನೂರು)
4. ಬಿ.ವಿ. ಬಳಲೂರ, ಅಂದಿನ ಉಗ್ರಾಣಪಾಲಕರು, ಜಿಪಂಇಂವಿ, ಕೊಪ್ಪಳ (ಪ್ರಸ್ತುತ ಜಿಎಲ್‌ಬಿಸಿ-ಉವಿ, ಕಾತರಕಿ, ಮುಧೋಳ ತಾ.)
5. ಈಶ್ವರ ಹತ್ತಿ, ಅಂದಿನ ಉಗ್ರಾಣಪಾಲಕರು, ಜಿಪಂಇಂವಿ, ಕೊಪ್ಪಳ (ಪ್ರಸ್ತುತ ಜಿಪಂಇಂವಿ, ಗದಗ್)
6. ಬಿ.ವಿ. ಹಿತ್ತಲಮನಿ, ಅಂದಿನ ದ್ವಿದಸ (ಪ್ರಸ್ತುತ ಜಿಪಂಇಂಉವಿ, ಕೊಪ್ಪಳದಲ್ಲಿ ಪ್ರದಸ)
7. ವಿ.ಜಿ. ಕೊಳ್ಳಪ್ಪನವರ ಅಂದಿನ ದ್ವಿದಸ (ಪ್ರಸ್ತುತ ಜಿಪಂಇಂವಿ, ಯಲಬುರ್ಗ)
8. ತಿರುಮಲರಾವ್, ಅಂದಿನ ದ್ವಿದಸ, ಜಿಪಂಇಂವಿ, ಕೊಪ್ಪಳ.
9. ಎಂ.ಹೆಚ್. ಜಾಗೀರದಾರ್, ಅಂದಿನ ಉಗ್ರಾಣ ಸಹಾಯಕರು, (ಪ್ರಸ್ತುತ ಕಂದಾಯ ಇಲಾಖೆ, ಯಲಬುರ್ಗದ ಬೆಳಕಲ್ ಗ್ರಾಮದಲ್ಲಿ ಗ್ರಾಮ ಲೆಕ್ಕಿಗ)
10. ಮಾರ್ಟಿನ್, ಅಂದಿನ ಉಗ್ರಾಣಸಹಾಯಕರು, (ಪ್ರಸ್ತುತ ಜಿಪಂಇಂಉವಿ, ಗಂಗಾವತಿ)
11. ವಲಿಬಾ, ಅಂದಿನ ಉಗ್ರಾಣ ಸಹಾಯಕರು, (ಪ್ರಸ್ತುತ ಜಿಪಂಇಂಉವಿ, ಕೊಪ್ಪಳ)
12. ಬಿ.ವೈ. ಮಾದಿನೂರು, ಅಂದಿನ ಲೆಕ್ಕಾಧೀಕ್ಷಕರು, ಜಿಪಂಇಂವಿ, ಕೊಪ್ಪಳ.

ಸದರಿ ಕಾರಣ ಕೇಳುವ ನೋಟಿಸಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿ ಸದರಿ ಅಧಿಕಾರಿ/ ನೌಕರರು ಲಿಖಿತ ಉತ್ತರವನ್ನು ಸಲ್ಲಿಸಿ, ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿದ್ದಾರೆ. ಆದರೆ, ಶ್ರೀ ಕೆ.ಎನ್. ಚಂದ್ರಶೇಖರ್, ಅಂದಿನ ಲೆಕ್ಕಾಧೀಕ್ಷಕರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಇವರು ಇಂದಿನವರೆವಿಗೂ ತಮ್ಮ ಲಿಖಿತ ಹೇಳಿಕೆ ಸಲ್ಲಿಸಿರುವುದಿಲ್ಲ. ಕಾರಣ ಕೇಳುವ ನೋಟೀಸಿನಲ್ಲಿ ಇವರಿಗೆ ನೀಡಿರುವ ಗಡುವು ಈಗಾಗಲೇ ಮುಗಿದಿರುತ್ತದೆ. ಆದ್ದರಿಂದ ಲಿಖಿತ ಉತ್ತರ ಸಲ್ಲಿಸಿರುವ ಹೇಳಿಕೆಗಳನ್ನು ಪರಿಶೀಲಿಸಿಲಾಗಿ ಅವು ಸಮರ್ಪಕವಾಗಿಲ್ಲವೆಂದು ಕಂಡು ಬಂದಿರುವುದರಿಂದ ಮತ್ತು ಆಪಾದಿತರು ಆರೋಪಿತ ದುರ್ನಡತೆಯನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡುಬರುವುದರಿಂದ ಆಪಾದಿತರ ಮೇಲಿನ ಆಪಾದನೆಗಳ ಬಗ್ಗೆ ಸತ್ಯಾಂಶಗಳನ್ನು ಅರಿಯಲು ಪ್ರಕರಣದಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ದಿನಾಂಕ: 15.02.2006 ರಂದು ಸದರಿ ಅಧಿಕಾರಿ/ ನೌಕರರ ಮೇಲಿನ ಆಪಾದನೆಗಳ ಬಗ್ಗೆ ಕನಾಸೇ (ವ.ನಿ.ಮೇ) 1957ರ ನಿಯಮ 11ರಲ್ಲಿ ವಿವರವಾದ ವಿಚಾರಣೆ ನಡೆಸಲು, ಸದರಿ ನಿಯಮ 11 (2)ರ ರಿತ್ಯ ಶ್ರೀ ಎಸ್.ವಿ. ಪಾಟೀಲ್, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11(5)ರ ರೀತ್ಯ ಸಹಾಯಕ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಕೊಪ್ಪಳ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ದಿನಾಂಕ: 24.02.2006 ರಂದು ಶ್ರೀ ಎಸ್.ವಿ. ಪಾಟೀಲ್, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಬೆಂಗಳೂರು ಇವರು ತನಗೆ ಬೆಂಗಳೂರು ಕರ್ನಾಟಕ ಬಾರ್ ಕೌನ್ಸಿಲ್ ಸಂಸ್ಥೆಗೆ ಕಾರ್ಯದರ್ಶಿಯನ್ನಾಗಿ ನೇಮಕ ಹೊಂದಿದ್ದರಿಂದ ವಿಚಾರಣೆ ನಡೆಸಲು ಸಾಧ್ಯವಾಗುವುದಿಲ್ಲವೆಂದು ಈ ಪ್ರಕರಣದಲ್ಲಿ ಬೇರೊಬ್ಬ ನಿವೃತ್ತ ನ್ಯಾಯಾಧೀಶರನ್ನು ನೇಮಿಸುವಂತೆ ಕೋರಿದ್ದಾರೆ. ಆದ್ದರಿಂದ, ಶ್ರೀ ಎಸ್.ವಿ. ಪಾಟೀಲ್, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಬೆಂಗಳೂರು ಇವರಿಂದ ಪ್ರಕರಣವನ್ನು ಹಿಂಪಡೆದು ಪ್ರಕರಣದಲ್ಲಿ ಶ್ರೀ ಟಿ.ಜಿ. ಮರಿಯಪ್ಪ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರು ತಮ್ಮ ಮನವಿ ದಿನಾಂಕ: 03.04.2006ರಲ್ಲಿ ಈ ಪ್ರಕರಣದಲ್ಲಿ ಮುಖ್ಯ ಇಂಜಿನಿಯರ್‌ರವರ ಕಛೇರಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇಲ್ಲಿ ಇಲಾಖಾ ವಿಚಾರಣೆ ನಡೆಸಲು ಏರ್ಪಾಡು ಮಾಡಿದ್ದಲ್ಲಿ ವಿಚಾರಣಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಒಪ್ಪುವುದಾಗಿ ತಿಳಿಸಿದ್ದರಿಂದ, ಅದರಂತೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲು ಸರ್ಕಾರವು ನಿರ್ಧರಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 38 ಇಎನ್‌ಕ್ಯೂ 04, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್, 2006**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಸೇವೆಯಲ್ಲಿರುವ ಅಧಿಕಾರಿ/ ನೌಕರರುಗಳ ಮೇಲಿನ ಆಪಾದನೆಗಳ ಬಗ್ಗೆ ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿದ್ದ ಶ್ರೀ ಎಸ್.ವಿ. ಪಾಟೀಲ್, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಇವರಿಂದ ಪ್ರಕರಣವನ್ನು ಹಿಂಪಡೆದು, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರಲ್ಲಿ ನಿಗದಿಪಡಿಸಲಾದ ವಿಧಿವಿಧಾನಗಳನ್ನು ಅನುಸರಿಸಿ ನಿಯಮ 13ರನ್ವಯ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ನಿಯಮ 11(2)ರ ರೀತ್ಯ ಶ್ರೀ ಟಿ.ಜಿ. ಮರಿಯಪ್ಪ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.648, 2ನೇ ಕ್ರಾಸ್, 8ನೇ ಮೈನ್, ಬಸವೇಶ್ವರನಗರ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11(5)ರ ರೀತ್ಯ ಸಹಾಯಕ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಕೊಪ್ಪಳ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಶಿಸಿದೆ.

**ಶ್ರೀಯುತರಾದ ಸೇವೆಯಲ್ಲಿರುವ ಅಧಿಕಾರಿ/ ನೌಕರರು**

1. ಕೆ.ಎನ್. ಚಂದ್ರಶೇಖರ್, ಅಂದಿನ ಲೆಕ್ಕಾಧೀಕ್ಷಕರು, ಜಿಪಂಇಂವಿ, ಕೊಪ್ಪಳ. (ಪ್ರಸ್ತುತ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಬೆಂಗಳೂರು)
2. ದೇವೇಂದ್ರಪ್ಪ ದೇಸಾಯಿ, ಅಂದಿನ ಪ್ರಭಾರ ಲೆಕ್ಕಾಧೀಕ್ಷಕರು, (ಪ್ರಸ್ತುತ ಜಿಪಂಇಂವಿ, ಕೊಪ್ಪಳದಲ್ಲಿ ಪ್ರದಸ)

3. ಎಂ. ಪಂಪಾಪತಿ, ಅಂದಿನ ಸಕಾಇಂ, ಜಿಪಂಇಂಉವಿ, ಕುಷ್ಟಗಿ (ಪ್ರಸ್ತುತ ಜಿಪಂಇಂಉವಿ, ಸಿಂಧನೂರು)
4. ಬಿ.ವಿ. ಬಳಲೂರ, ಅಂದಿನ ಉಗ್ರಾಣಪಾಲಕರು, ಜಿಪಂಇಂವಿ, ಕೊಪ್ಪಳ (ಪ್ರಸ್ತುತ ಜಿಎಲ್‌ಬಿಸಿ-ಉವಿ, ಕಾತರಕಿ, ಮುಧೋಳ ತಾ.)
5. ಈಶ್ವರ ಹತ್ತಿ, ಅಂದಿನ ಉಗ್ರಾಣಪಾಲಕರು, ಜಿಪಂಇಂವಿ, ಕೊಪ್ಪಳ (ಪ್ರಸ್ತುತ ಜಿಪಂಇಂವಿ, ಗದಗ್)
6. ಬಿ.ವಿ. ಹಿತ್ತಲಮನಿ, ಅಂದಿನ ದ್ವಿದಸ (ಪ್ರಸ್ತುತ ಜಿಪಂಇಂಉವಿ, ಕೊಪ್ಪಳದಲ್ಲಿ ಪ್ರದಸ)
7. ವಿ.ಜಿ. ಕೊಳಪ್ಪನವರ ಅಂದಿನ ದ್ವಿದಸ (ಪ್ರಸ್ತುತ ಜಿಪಂಇಂವಿ, ಯಲಬುರ್ಗ)
8. ತಿರುಮಲರಾವ್, ಅಂದಿನ ದ್ವಿದಸ, ಜಿಪಂಇಂವಿ, ಕೊಪ್ಪಳ.
9. ಎಂ.ಹೆಚ್. ಜಾಗೀರದಾರ್, ಅಂದಿನ ಉಗ್ರಾಣ ಸಹಾಯಕರು, (ಪ್ರಸ್ತುತ ಕಂದಾಯ ಇಲಾಖೆ, ಯಲಬುರ್ಗದ ಬೆಳಕಲ್ ಗ್ರಾಮದಲ್ಲಿ ಗ್ರಾಮ ಲೆಕ್ಕಿಗ)
10. ಮಾರ್ಟಿನ್, ಅಂದಿನ ಉಗ್ರಾಣಸಹಾಯಕರು, (ಪ್ರಸ್ತುತ ಜಿಪಂಇಂಉವಿ, ಗಂಗಾವತಿ)
11. ವಲಿಬಾ, ಅಂದಿನ ಉಗ್ರಾಣ ಸಹಾಯಕರು, (ಪ್ರಸ್ತುತ ಜಿಪಂಇಂಉವಿ, ಕೊಪ್ಪಳ)
12. ಬಿ.ವೈ. ಮಾದಿನೂರು, ಅಂದಿನ ಲೆಕ್ಕಾಧೀಕ್ಷಕರು, ಜಿಪಂಇಂವಿ, ಕೊಪ್ಪಳ.

ಈ ವಿಚಾರಣೆಯನ್ನು 3 ತಿಂಗಳೊಳಗಾಗಿ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ನಿಯಮಾನುಸಾರ ನಿಗದಿತ ಸಂಭಾವನೆಯನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್.599

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT

**Sub:** Approval of the project proposal of M/s. Infosys Technologies Ltd. for establishment of Software Development Centre in 430 acres of land in Yamare village and Industrial Housing Project in 415 acres of land in Sarjapur village of Anekal Taluk, Bangalore District – reg.

**Read:**
1) Proceedings of the 2nd State High level Clearance Committee (SHLCC) Meeting held on 30th December 2004.
2) Proceedings of the 4th State High Level Clearance Committee (SHLCC) Meeting held on 6th June 2005.
3) Government Order No. ITD/09/MDA/2005 dated 3rd August 2005.
4) Letter No.BMRDA/KUM/Infosys/2005-06 dated 28th January 2006 of Metropolitan Commissioner, BMRDA, Bangalore.
5) Proceedings of the 2nd Land Audit Committee Meeting held on 18th January 2006.
6) U.O. Note No.CI 68 SPI 2006 dated 16th March 2006 of Principal Secretary to Government Commerce and Industries Department.

**Preamble:**

In the SHLCC meeting read at (1) above, clearance was given to Infosys Technologies Limited for establishment of a Software Development Centre at Bangalore, Mysore and Mangalore. The land identified for setting up Software Development Centre at Bangalore lies in the Green Belt as per the CDP and therefore the acquisition could not be taken up. Since the revision of CDP is likely to take some time, the Company identified alternative land. The lands identified are:

a) 430 acres in Yamare Village of Anekal taluk for Software Development Centre.
b) 415 acres in Sarjapur village of Anekal taluk for Industrial Housing.

In the SHLCC Meeting read at (2) above, the request of the Company for alternative land was examined and it was found that the identified land lies in the *'Interstitial Zone'* of ODP of BMRDA. While the Urban Development Department agreed to consider the request of the Company to effect the change of land use for Industrial Housing purposes, it was also decided that the Land Audit Committee will assess the requirement of land by the Company.

In the meantime, the Government Order read at (3) above was issued in respect of the projects of the Company in Mysore and Mangalore.

The BMRDA in letter read at (4) above has reclassified the lands identified by the Company in Yamare and Sarjapur villages and accordingly permitted the usage of land for Industrial and Housing purposes. The land now lies in Area Planning Zone (APZ-5). The structure plan for the area lays more

emphasis on Housing and less emphasis on Industrialization and hence Industrial development is to be restricted to not more than 100 hectares (250 acres).

The Land Audit Committee in the Meeting read at (5) above examined the requirement of land by the Company to build the Software Development Centre in 430 acres of land in Yamare village and an exclusive Industrial Township of 8000 units to house about 32,000 persons in 415 acres of land at Sarjapur village in Anekal taluk, both at a cost of Rs. 1,500 crores and providing employment to about 32,000 persons.

In U.O. Note read at (6) above, the C & I Department has recommended consideration of the request of the Company for acquisition of 430 acres of land at Yamare village for establishment of Software Development Centre and 415 acres of land at Sarjapur Village for Industrial Housing. The C & I Department has opined that since it would be consent acquisition, it is expected that the land owners would be given a fair compensation for lands acquired. Hence it has requested this Department to issue formal Government Orders.

Government have examined the matter in all its aspects and hence the following Order.

**Government Order No. ITD 09 MDA 2005, Bangalore, Dated 24th March, 2006**

In the circumstances explained in the Preamble, Government is pleased to accord approval to M/s. Infosys Technologies Limited, Bangalore, to set up Software Development Centre in 430 acres of land in Yamare village and an exclusive Industrial Housing Township of 8000 units to house about 32,000 persons in 415 acres of land at Sarjapur village in Anekal taluk, both at a cost of Rs. 1,500 crores and providing employment to about 32,000 persons.

**Infrastructure facilities:**

**Land:** Karnataka Industrial Area Development Board (KIADB) Bangalore will acquire and allot lands for both the Software Development Centre and Industrial Housing Township on consent basis.

**Water:** The BWSSB to supply required quantum of water for their facility after taking into account the quantumof water estimated to be recycled.

**Power:** The BESCOM to consider supply of power for its facilities.

**Incentives and Concessions:**

Incentives and Concessions as per the Millennium IT Policy 2000 shall be extended to the Company.

**Environment & pollution Control Clearances:**

The Company shall apply for and obtain pollution and environmental clearances from Karnataka State Pollution Control Board and the Ministry of Environment and Forests, Government of India, New Delhi, as per the provisions of the Acts and Rules governing environmentally protection.

**Providing Local Employment**

The Company shall provide employment to local persons in terms of prevailing policy of Government.

By Order and in the name of the Governor of Karnataka

**MOHAMED KHALEELUR RAHMAN**

PR-475

Deputy Secretary to Government,
Information Technology, Biotechnology
and Science & Technology Department.

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಜಿ.ಕೆ.ರಾಜಣ್ಣ, ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರ ವಿರುದ್ಧ ಶಿಸ್ತು ಕ್ರಮವನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆನಾಸ 235 ಆಇಸೇ 2003, ದಿನಾಂಕ:28.7.2005.

2) ಶ್ರೀ ಎಸ್.ಎಸ್.ಸಂಗೊಳ್ಳಿ, ವಿಚಾರಣಾಧಿಕಾರಿಗಳ ದಿನಾಂಕ:29.12.2005ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಜಿ.ಕೆ.ರಾಜಣ್ಣ, ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆರವರು ಸರ್ಕಾರದ ಆದೇಶಗಳ ಸೂಚನೆಗಳನ್ನು ಉಲ್ಲಂಘಿಸಿ ಆಹಾರ ಶಿರಸ್ತೇದಾರರಾದ ಶ್ರೀ ಡಿ.ಕೆ.ನಾಗರಾಜುರವರಿಗೆ ವರ್ಗಾವಣೆ ಸಂದರ್ಭದಲ್ಲಿ ಕರ್ತವ್ಯಕ್ಕೆ ಗೈರುಹಾಜರಾಗಿರುವ ಅವಧಿಗೆ ಸಂಬಂಧಿಸಿದಂತೆ ರಜೆಯನ್ನು ಮಂಜೂರು ಮಾಡಿರುವ ಕ್ರಮವು ಸಮಂಜಸವಾಗಿರುವುದಿಲ್ಲವೆಂದು ತಿಳಿಸಿ ಇವರ ಮೇಲೆ ಶಿಸ್ತು ಕ್ರಮಕ್ಕಾಗಿ ಆಯುಕ್ತರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ ಇವರು ಕೋರಿರುವ ಹಿನ್ನೆಲೆಯಲ್ಲಿ ಇವರ ಮೇಲೆ ಇಲಾಖಾ

ವಿಚಾರಣೆ ನಡೆಸಲು ಸರ್ಕಾರ ತೀರ್ಮಾನಿಸಿ ಇಲಾಖಾ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಶ್ರೀ ಎನ್.ಎಸ್.ಸಂಗೊಳ್ಳಿ, ನಿವೃತ್ತ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ವಿಚಾರಣಾ ವರದಿಯಲ್ಲಿ ಶ್ರೀ ಜಿ.ಕೆ.ರಾಜಣ್ಣ, ಉಪನಿರ್ದೇಶಕರು, ಇವರು ಜಿಲ್ಲಾಧಿಕಾರಿಗಳ ಆದೇಶವನ್ನು ಪಡೆದು ರಜೆ ಮಂಜೂರು ಮಾಡಿರುತ್ತಾರೆಂದೂ, ಅಲ್ಲದೆ ಶ್ರೀ ಡಿ.ಕೆ.ನಾಗರಾಜು, ಆಹಾರ ಶಿರಸ್ತೇದಾರರು ಅವರ ವರ್ಗಾವಣೆ ಆದೇಶದಲ್ಲಿರುವ ಬಗ್ಗೆ ತಹಶೀಲ್ದಾರರು ತಮ್ಮ ವರದಿಯಲ್ಲಿ ವಿಷಯವನ್ನು ತಿಳಿಸಿಲ್ಲವೆಂದು, ಆ ಕಾರಣಕ್ಕೆ ಆರೋಪಿ ಅಧಿಕಾರಿಯಾದ ಶ್ರೀ ಜಿ.ಕೆ.ರಾಜಣ್ಣನವರು ರಜೆ ಮಂಜೂರು ಮಾಡಿರುವುದು ಸರಿಯಾಗಿದೆ ಎಂದು ಅಭಿಪ್ರಾಯ ಪಟ್ಟಿರುತ್ತಾರೆ. ಅಲ್ಲದೆ ಈ ಆಪಾದಿತರು ಸೇವಾ ನಿಯಮಗಳ ಮೇರೆಗೆ ರಜೆ ಅರ್ಜಿ ಯಾವುದೇ ಸ್ವರೂಪದ್ದಿರಲಿ, ಅಥವಾ ಯಾವುದೇ ಕಾರಣಗಳಾಗಿರಲಿ, ಬಂದಾಗ ಅವರ ಮೇಲೆ ಒಂದು ಆದೇಶವನ್ನು ಅಂಥ ಆದೇಶ ಮಾಡುವ ಅಧಿಕಾರವಿದ್ದ ಅಧಿಕಾರಿ ಮಾಡಬೇಕಾಗಿರುವುದರಿಂದ, ಈ ಪ್ರಕರಣದಲ್ಲಿ ಮಾಡದಿದ್ದರೂ ಸಹ ಅದೂ ಸಹ ಕರ್ತವ್ಯ ನಿರ್ಲಕ್ಷ್ಯತೆಯಾಗುತ್ತದೆ. ಹೀಗಿರುವಾಗ ತಹಶೀಲ್ದಾರರಿಂದ ಬಂದ ಕಛೇರಿಯ ಸಂಬಂಧಪಟ್ಟ ಅಧಿಕಾರಿಗಳ ಪರಿಶೀಲನೆಯ ನಂತರ ಅವರ ಟಿಪ್ಪಣಿಗಳನ್ನು ಆಧರಿಸಿ ಮಾಡಿದ ರಜೆ ಮಂಜೂರಾತಿ ಆದೇಶ ಕಾನೂನು ಬಾಹಿರ, ನಿಯಮ ಬಾಹಿರ ಅಥವಾ ಮಾರ್ಗಸೂಚಿ ಉಲ್ಲಂಘನೆ ಮಾಡಿ ಮಾಡಿದ್ದು ಅನ್ನಲಾಗದು ಎಂಬ ನಿರ್ಣಯಕ್ಕೆ ಬಂದಿದ್ದು ಈ ಎಲ್ಲಾ ಕಾರಣಗಳಿಂದ ಆಪಾದಿತರ ವಿರುದ್ಧ ಮಾಡಲಾದ ಆಪಾದನೆಯು ರುಜುವಾತುಪಡಿಸಲಾಗಿಲ್ಲವೆಂದು ನಿರ್ಣಯಕ್ಕೆ ಬಂದಿರುತ್ತಾರೆ.

ಆದ್ದರಿಂದ ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 235 ಆಇಸೇ 2003, ಬೆಂಗಳೂರು, ದಿನಾಂಕ: 27ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಕೆ.ರಾಜಣ್ಣ, ಉಪನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಮೇಲಿನ ಆಪಾದನೆಗಳನ್ನು ತಳ್ಳಿಹಾಕಿ ಇವರನ್ನು ದೋಷಮುಕ್ತರನ್ನಾಗಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ, ಆಹಾರ-1 ಶಾಖೆ,
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್.469

**ವಿಷಯ:** ಶ್ರೀ ಟಿ.ಸೋಮಶೇಖರರೆಡ್ಡಿ, ಕಾನೂನು ಮಾಪನಶಾಸ್ತ್ರ ನಿರೀಕ್ಷಕರು, ಸಿಟಿ ಮಾರ್ಕೆಟ್ 1ನೇ ಉಪವಿಭಾಗ, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ಇವರ ಮೇಲೆ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದ ಇಲಾಖಾ ವಿಚಾರಣೆ ನಡೆಸಿ ದೋಷಮುಕ್ತರನ್ನಾಗಿ ಪರಿಗಣಿಸುವ ಬಗ್ಗೆ.

**ಓದಲಾಗಿದೆ:**
1. ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರಸಂಖ್ಯೆ:ಕಂಪ್ಲೆಂಟ್.ಉಪಲೋಕ. ಬಿಸಿಡಿ-169/2003/ಡಿಆರ್ಇ.2 ದಿನಾಂಕ:25.2.2005.
2. ಸರ್ಕಾರಿ ಆದೇಶ ಸಂಖ್ಯೆ:ಆನಾಸ 46 ಕಾಮಾಸೇ 2002, ದಿನಾಂಕ:2.4.2005.
3. ಮಾನ್ಯ ಉಪಲೋಕಾಯುಕ್ತರು, ಬೆಂಗಳೂರು ಇವರ ಅರೆಸರ್ಕಾರಿ ಪತ್ರಸಂಖ್ಯೆ:ಲೋಕ್/ಎಆರ್ಇ.4/ ಇಎನ್ಕ್ಯೂ.5/ 2005, ದಿನಾಂಕ:20.2.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರು ಮಾನ್ಯ ಉಪಲೋಕಾಯುಕ್ತರವರ ದಿನಾಂಕ:24.2.2005ರ ವರದಿಯನ್ನು ಕಳುಹಿಸಿ ಶ್ರೀ ಟಿ.ಸೋಮಶೇಖರರೆಡ್ಡಿ, ನಿರೀಕ್ಷಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಅವರು ಬೆಂಗಳೂರು ಸಿಟಿ ಮಾರುಕಟ್ಟೆ, 1ನೇ ಉಪವಿಭಾಗದಲ್ಲಿ ನಿರೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಎಸ್.ಸೋಮಶೇಖರ್, ನಂ.70, ಚಂದನಾ ಎಲೆಕ್ಟ್ರಾನಿಕ್ ವೈಯಿಂಗ್ ಅಂಡ್ ಕಟಿಂಗ್ ವರ್ಕ್ಸ್, ಬಸವಣ್ಣ ಬೀದಿ, ಅಂಚೆಪೇಟೆ ಬೆಂಗಳೂರು ಅವರಿಗೆ ಸೇರಿದ ತೂಕದ ಯಂತ್ರವನ್ನು ಪರಿಶೀಲಿಸಿ ಮುದ್ರೆ ಮಾಡಲು ಸರ್ಕಾರಿ ಶುಲ್ಕ ರೂ.90/-ಗಳ ಜೊತೆಗೆ ರೂ.360/- ಗಳನ್ನು ಹೆಚ್ಚುವರಿಯಾಗಿ ಲಂಚ ಕೇಳಿದ್ದರಿಂದ ಲಂಚ ಕೊಡಲು ಒಪ್ಪದ ಅರ್ಜಿದಾರರು ಲೋಕಾಯುಕ್ತಕ್ಕೆ ಮಾಡಲಾದ ಫಿರ್ಯಾದಿನ ಮೇರೆಗೆ ಲೋಕಾಯುಕ್ತ ಪೊಲೀಸ್ ವಿಭಾಗ ದಿನಾಂಕ:18.2.2002ರಂದು ಬೀಸಿದ ಬಲೆಯಲ್ಲಿ ಲಂಚವನ್ನು ಶ್ರೀ ಚನ್ನಯ್ಯ ಎಂಬುವವರ ಮುಖಾಂತರ ಸ್ವೀಕರಿಸುವ ಮೂಲಕ ಸಿಕ್ಕಿಬಿದ್ದಿದ್ದರ ಸಂಬಂಧ ನಡೆಸಲಾದ ತನಿಖೆಯಲ್ಲಿ ಆಪಾದಿತ ನೌಕರ ಶ್ರೀ ಟಿ.ಸೋಮಶೇಖರ ರೆಡ್ಡಿ ಅವರ ವಿರುದ್ಧ ಮಾಡಲಾಗಿರುವ ಆರೋಪ ಮೇಲುನೋಟಕ್ಕೆ ಸತ್ಯವಾಗಿರುವುದರಿಂದ ಅವರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವೆಗಳು (ಸಿಸಿಎ) ನಿಯಮಗಳ ಅಡಿಯಲ್ಲಿ ಪೂರ್ಣಪ್ರಮಾಣದ ತನಿಖೆ ನಡೆಸಲು ಸದರಿ ನಿಯಮಾವಳಿಗಳ ನಿಯಮ 14(ಎ)ರಡಿಯಲ್ಲಿ ಉಪಲೋಕಾಯುಕ್ತಕ್ಕೆ ವಹಿಸಲು ಶಿಫಾರಸ್ಸು ಮಾಡಿ 1984ರ ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಕಲಂ 12(3)ರಡಿಯಲ್ಲಿ ಕಳುಹಿಸಿರುವ ವರದಿಯನ್ನು ರವಾನಿಸುತ್ತಾ ಕೂಡಲೇ ಕ್ರಮ ಕೈಗೊಳ್ಳುವಂತೆ ತಿಳಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಟಿ.ಸೋಮಶೇಖರರೆಡ್ಡಿ ನಿರೀಕ್ಷಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ಇವರ ವಿರುದ್ಧ ದಾಖಲಾಗಿರುವ ಆರೋಪಗಳ ಬಗ್ಗೆ ಕರ್ನಾಟಕ ನಾಗರಿಕ ಸೇವೆಗಳು (ಸಿಸಿಎ) ನಿಯಮಾವಳಿಗಳು 1957ರ ನಿಯಮ 14(ಎ) ಮೇರೆಗೆ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಮಾನ್ಯ ಉಪಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಿಕೊಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಮಾನ್ಯ ಉಪಲೋಕಾಯುಕ್ತ, ಬೆಂಗಳೂರು ಇವರು ಹೆಚ್ಚುವರಿ ನಿಬಂಧಕರು, ವಿಚಾರಣೆಗಳು-4, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ:10.1.2006ರ ಶಿಫಾರಸ್ಸು ಹಾಗೂ ದಿನಾಂಕ:10.1.2006ರ ವಿಚಾರಣಾಧಿಕಾರಿ ಹಾಗೂ ದಾಖಲೆಗಳನ್ನು ಸಲ್ಲಿಸಿರುತ್ತಾರೆ. ಹೆಚ್ಚುವರಿ ನಿಬಂಧಕರು, ವಿಚಾರಣೆಗಳು-4, ಕರ್ನಾಟಕ ಲೋಕಾಯುಕ್ತರವರ ದಿನಾಂಕ:10.1.2006ರ ವಿವರವಾದ ವರದಿಯ ಆಧಾರದ ಮೇಲೆ ಮಾನ್ಯ ಉಪಲೋಕಾಯುಕ್ತರವರು ಶ್ರೀ ಟಿ.ಸೋಮಶೇಖರರೆಡ್ಡಿ, ನಿರೀಕ್ಷಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ಇವರ ವಿರುದ್ಧ ಲಂಚ ಸ್ವೀಕೃತಿ ಆರೋಪವು ವಿಚಾರಣೆಯಲ್ಲಿ ರುಜುವಾತಾಗಿಲ್ಲದಿರುವುದರಿಂದ ಈ ಪ್ರಕರಣವನ್ನು ಕೈಬಿಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಆದ್ದರಿಂದ, ಸರ್ಕಾರವು ಇವರನ್ನು ಆರೋಪಗಳಿಂದ ದೋಷಮುಕ್ತರನ್ನಾಗಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 46 ಕಾಮಾಸೇ 2002, ಬೆಂಗಳೂರು, ದಿನಾಂಕ: 22ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಟಿ.ಸೋಮಶೇಖರರೆಡ್ಡಿ, ಕಾನೂನು ಮಾಪನಶಾಸ್ತ್ರ ನಿರೀಕ್ಷಕರು, ಬೆಂಗಳೂರು ಇವರ ಮೇಲೆ ಸರ್ಕಾರಿ ಆದೇಶ ಸಂಖ್ಯೆ: ಆನಾಸ 46 ಕಾಮಾಸೇ 2002, ದಿನಾಂಕ:2.4.2005ರಲ್ಲಿ ಕರ್ನಾಟಕ ನಾಗರಿಕ ಸೇವೆಗಳು (ಸಿಸಿಎ) ನಿಯಮಾವಳಿಗಳು 1957ರ ನಿಯಮ 14(ಎ)ರನ್ವಯ ಪ್ರಾರಂಭಿಸಲಾದ ಇಲಾಖಾ ವಿಚಾರಣೆಯನ್ನು ಈ ಮೂಲಕ ಕೈಬಿಟ್ಟು ಆರೋಪಗಳಿಂದ ದೋಷಮುಕ್ತರನ್ನಾಗಿ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎಸ್. ವಿಶ್ವೇಶ್ವರಯ್ಯ**
ಪೀಠಾಧಿಕಾರಿ, ಆಹಾರ-1 ಶಾಖೆ,
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್.470

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT

**Sub:** Redemption of Mahithi Bonds by exercising Put and Call Option at the end of five years - To permit KEONICS to avail a loan of Rs.54.00 Crores from HUDCO- Approval for – Orders reg.

**Read:**
(1) Government Order No. ITD 30 PRM 2000 dated 16.11.2000.
(2) Government Order No. ITD 30 PRM 2000 (P-II) dated 09.01.2002.
(3) Government Order No. ITD 30 PRM 2000 (P-II) dated 20.02.2003 read with Corrigendum of even number dated 22.02.2003.
(4) Government Order No. ITD 30 PRM 2000 (P) dated 24.12.2003.
(5) Government Order No. ITD 30 PRM 2000 (P) dated 19.01.2004.
(6) Government Order No. ITD 30 PRM 2000 (P) dated 23.12.2004
(7) Letter No. KSEDC/F & A/2004-05 dated 24.12.2004 of the Director (Operations), KEONICS, Bangalore.
(8) Government's letter No. ITD 01 PRM 2005 dated 09.02.2005.
(9) Letter No. KSEDC/DO/MD/MB/2004-06 dated 06.05.2005 of the Managing Director, KEONICS, Bangalore.
(10) Government's letter No. ITD 01 PRM 2005 dated 08.08.2005.
(11) Letter No. KSEDC/F & A/2005-06 dated 19.09.2005 of the Managing Director, KEONICS, Bangalore.
(12) Letter No. KSEDC/F & A/2005-06 dated 26.11.2005 of the Director (Operations), KEONICS, Bangalore.
(13) Government Order No. ITD 30 PRM 2000 (P) dated 30.12.2005.
(14) Government Order No. FD 61 BRS 2006 dated 15.02.2006.
(15) Letter No. KSEDC/F&A/2005 – 06 dated 04.03.2006 of the Director (Operations), KEONICS, Bangalore.

**Preamble:**

In the Government Order dated 16.11.2000 read at (1) above, orders were issued according sanction to raise a loan of Rs. 300.00 Crores through private placement in 3 phases as detailed below: -

| | | |
|---|---|---|
| Stage I | I Week of October 2000 | Private Placement of Bonds for Rs. 60.00 Crores |
| Stage II | I Week of October 2001 | Private Placement of Bonds for Rs. 120.00 Crores |
| Stage III | I Week of October 2002 | Private Placement of Bonds for Rs. 120.00 Crores |

It was also indicated in the said Order that further borrowings should be resorted to only after review of the expenditure of Rs. 60.00 Crores borrowed in the first tranche.

The amount of Rs. 60.00 Crores generated through the issue of Mahiti Bonds was to be utilised to achieve the various objectives enshrined in the **'Mahiti – the Millennium IT Policy'** and to implement the various schemes envisaged therein.

M/s KEONICS Limited, a Government of Karnataka Undertaking, was authorized to be the Corporate Front-end of Government for handling the entire Issue of the Mahithi Bonds. Accordingly M/s. KEONICS Limited, Bangalore issued Non-convertible Redeemable Bond Series - I, referred to as "Mahithi Bonds" of the face value of Rs. 50,000/-each totaling to Rs. 60.00 Crores. Although the rate of interest that was prevailing at the time of issue of the Bonds i.e., during 2000-01 was 12.5 %, Coupon Rate was fixed at Rs.12.75 % to attract the investors to the Issue.

Government has spent Rs. 60.00 Crores generated through issue of Mahithi Bonds as well as the interest earned thereon for the implementation of various Schemes and Projects relating to promotion and development of Information Technology and Biotechnology sectors.

Most of the Schemes and Projects for which funds were generated through Mahithi Bonds were long term investments and no immediate direct revenue as the returns from these projects are either non-tangible in nature or have a long gestation period. However, Government has paid the interest to the Bond holders, which falls due on 25$^{th}$ January of every year, at the Coupon rate of 12.75%, through budgetary support. A total of Rs. 38.25 Crores had been released @ Rs. 765.00 Lakhs per annum for 5 years up to 25.1.2006 vide the Government Orders read at (2) to (6) and (13) above.

Memorandum of Private Placement for Non-convertible Redeemable Bonds Series I (Mahithi Bonds) envisaged early redemption option called "Put and call" option to the bond Holders as well as to the KEONICS. Under this scheme, the Bond Holders/ KEONICS had the right to exercise the option of early redemption of Bonds at the end of Fifth year from the deemed date of allotment (relevant date) at par after following the due procedure as laid down therein.

KEONICS, vide its letter dated 24.12.04 read at (7) above, had requested Government to examine the feasibility of exercising the 'put and call' option available to KEONICS in the Memorandum of Private Placement for Non - convertible Redeemable Bonds Series -I at the end of the 5$^{th}$ year.

After examining the proposal of the KEONICS in all its aspects, the Managing Director, KEONICS was requested vide Government's letter dated 9.02.05 read at (8) above, to explore the possibility of getting loan from financial institutions like HUDCO, ICICI etc. at lower rate of interest and to send a concrete proposal to Government along with Letter of Intent of the financial institutions so identified.

In pursuance thereof, the Managing Director, KEONICS, vide his letter dated 6.5.05 read at (9) above, reported that the Company approached HUDCO, SBI, Indus Ind Bank and ICICI Limited for financial assistance in the form of long term loan to raise Rs. 60.00 Crores for repayment to the Bond Holders. He has stated further that only HUDCO, a Government of India enterprise, has come forward to extend the loan of Rs. 60.00 Crores at the interest rate of 8.25% per annum (fixed rate of interest) which appear competitive and less by 4.5%, vis-à-vis, the present Coupon Rate of 12.75% being paid to Mahithi Bond Holders. Explaining the above details, the Managing Director, KEONICS, requested Government to consider the proposal and intimate the decision taken for taking further action at his end.

After due examination of the proposal, the Managing Director, KEONICS was further requested, vide Government's letter dated 08.08.2005 read at (10) above to take up the matter with HUDCO and thereafter send a suitable proposal to Government along with the terms and conditions of loan which shall inter-alia contain, apart from other things, a provision for 'put and call' option at the end of the first year and that the tenure of loan should be seven years.

In response thereto, the Managing Director, KEONICS, vide his letter dated 19.9.2005 read at (11) above reported that having regard to the conditions specified in the Government letter dated 08.08.2005, HUDCO has informed that the proposed loan can be for a tenure of upto10 years for repayment with a pre-closure clause at the end of 1$^{st}$ year and that the fixed rate of interest has been increased from 8.25% to 8.75% and floating rate from 7.75% to 8.25% respectively. While this was being examined by Government, KEONICS vide its letter dated 26.11.2005 read at (12) above as informed that as per the guidelines of HUDCO, only 90% of the project cost could be sanctioned as loan by the Corporation and as such, against the loan of Rs. 60.00 Crores sought by KEONICS, only Rs. 54.00 Crores could be sanctioned by it and that the deficit of Rs. 6.00 Crores needs to be met by the State Government to complete the process of redeeming the Mahithi Bonds.

KEONICS has further informed that the State Government is also required to bear the expenditure towards front-end fee @ of 0.5% which works out to Rs. 27.00 lakhs plus applicable service tax apart from application fee of Rs. 5.00 lakhs plus applicable service tax. Thus a total of Rs. 6,35,26,400/- has to be borne by the State Government for availing a loan of Rs. 54.00 Crores.

Taking the above aspect of the issue into account, the matter was again examined in its entirety in consultation with Finance Department with regard to providing budgetary support of Rs. 6,35,26,400.00 to supplement the loan of Rs. 54.00 Crores proposed to be borrowed from HUDCO so as to complete the process of redeeming of the Mahithi Bonds. Government has accorded sanction vide Government Order dated 15.02.2006 read at (14) above for an additional grant of Rs. 610.00 lakhs under the Head of Account 5465-01-190-1-08 Mahithi Bonds – 240 Debt Servicing (Plan) to be regularized by reappropriation of overall savings under Grant No. 15 /through Supplementary Estimates before the close of the financial year, to meet the expenditure towards the 'put and call' option for redeeming the Mahithi Bonds. In the Supplementary Estimates 2005-06 (II Installment), an amount of Rs. 610.00 lakhs has been provided as additionality under the above Head of Account to be utilised for redemption of Mahithi Bonds.

KEONICS further informed, vide their letter dated 04.03.2006 read at (15) that M/s HUDCO have increased the Fixed Rate of Interest from the proposed 8.75% to 10.25% and Floating Rate of Interest from 8.25% to 9.75% with effect from 01.03.2006 as per their financial norms. It was also stated that even with the proposed increase in the Fixed Rate of Interest of 10.25% P A , Government could still save substantial amount if the loan of Rs.54.00 crores is availed from HUDCO at the said increased rate for 22 months or for 7 years.

The matter was examined by the Government at Cabinet level and approved the proposal to permit KEONICS to avail a loan of Rs. 54.00 Crores from HUDCO for a period of 22 months i.e. up to the date of maturity of Bonds viz 31.1.2008 at a fixed rate of interest @ Rs. 10.25% per annum or for a period of 7 years subject to the Terms & Conditions stipulated by HUDCO, to give a Guarantee by the Government for a loan of Rs. 54.00 Crores being borrowed by KEONICS from HUDCO in order to redeem Mahithi Bonds; and to release an amount of Rs. 6,35,26,400/- to KEONICS from the balance available under the Head of Account 5465-01-190-1-08 Mahithi Bonds – 240 Debt Servicing (Plan) apart from the additional Rs. 610.00 lakhs sanctioned, vide the Government Order dated 15.2.2006, to complete the process of redeeming the Mahithi Bonds. Hence the following order.

**Government Order No. ITD 01 PRM 2005, Bangalore, Dated 24th March, 2006**

In the circumstances explained in the Preamble, sanction is accorded to –

(i) Permit KEONICS to avail a loan of Rs. 54.00 Crores (Rupees Fifty Four Crores only) from HUDCO at a fixed rate of interest 10.25% per annum for a period of 7 years from the date of drawal of the loan with a provision to invoke the 'Put and Call' option at the end of first year or at the end of 22 months i.e. up to the date of maturity of the Bonds viz 31.1.2008 subject to the Terms & Conditions as detailed in the Annexure to this Order.

(ii) To give a Government Guarantee for the loan of Rs. 54.00 Crores being borrowed by KEONICS from HUDCO to redeem Mahithi Bonds, subject to payment of Guarantee Commission at the rate prescribed by Government from time to time; and

(iii) To release an amount of Rs. 6,35,26,400/- (Rupees Six Crores Thirty Five Lakhs Twenty Six Thousand and Four Hundred only) to KEONICS under Head of Account 5465-01-190-1-08 Mahithi Bonds–240 Debt Servicing (Plan) including the additional amount of Rs.610.00 Lakhs sanctioned vide Govt. Order no. FD 61 BRS 2006 dated 15.02.2006 and provided in the Supplementary Estimates 2005-06 (II Installment).

KEONICS is permitted to go ahead for redeeming the Mahithi Bonds and complete the process.

The expenditure of Rs. 6,35,26,400/- shall be debited to the Head of Account 5465-01-190-1-08 Mahithi Bonds–240 Debt Servicing (Plan).

The Managing Director, M/s. KEONICS Ltd., Bangalore is permitted to draw this amount on the Payees Receipt duly countersigned by the Director, Department of Information Technology & Biotechnology, Bangalore.

The Managing Director, M/s. KEONICS Ltd., Bangalore shall furnish the Utilization Certificate through the Director, Department of Information Technology & Biotechnology, Bangalore.

This order issues with the concurrence of Planning Department and Finance Departments, vide their U.O. Notes No. PD 181 PFR 2005 dated 17.06.2005 and FD 67 /Exp.1/05 dated 27.01.2005, FD 1224 /Exp.1/05 dated 01.08.2005 and FD 1817/Exp.1/05 dated 05.12.2005 respectively.

By Order and in the name of the Governor of Karnataka

**MOHAMED KHALEELUR RAHMAN**

Deputy Secretary to Government,
Information Technology, Biotechnology
and Science & Technology Department.

**ANNEXURE TO GOVERNMENT ORDER NO. ITD 01 PRM 2005 BANGALORE DATED 24 -03 - 2006**

**TERMS AND CONDITIONS OF AVAILING HUDCO LOAN**

| | | |
|---|---|---|
| 01 | Repayment Schedule | Interest and principal payable quarterly |
| 02 | One time non – refundable Application Fee | Rs.5.00 Lakhs + applicable Service Tax.<br>50% payable along with proposal and balance 50% payable before issue of sanction letter. |
| 03 | Front end Fee | Rs.27.00 Lakhs + applicable Service Tax payable at the time of loan release. |
| 04 | Penal Interest | 3% on over due amount |
| 05 | Automatic reset of Fixed Rate of Interest | Loan sanctioned/released at Fixed Rate (FR) shall be automatically reset upon expiry of every three years at then prevailing fixed rate from the date of first release. The resetting shall be effective from 1st day of quarter/month (as per billing cycle) in which resetting is due. Necessary provision in the agreement will be necessary stating that " Borrower is agreeable for automatic reset upon expiry of three years at then applicable fixed rates and shall execute a supplementary agreement to this effect in case of resetting of loan on fixed rate. However, borrower are given an option to prepay the loan without prepayment charges after three years as an alternative to automatic reset". |
| 06 | Prepayment charges in case loan is repaid at the end of one year or 22 months | Prepayment charge on the amount prepaid at differential interest rate calculated (without compounding) for one year subject to minimum of 2% differential interest rate shall be the difference of weighted rate of interest on which releases have been made and weighted rate of interest as per current prevailing financing norms.<br>Prepayment charges will be calculated/recovered based on the guidelines prevailing at the time of prepayment irrespective of the provision in the agreement. |

**MOHAMED KHALEELUR RAHMAN**

Deputy Secretary to Government,
Information Technology, Biotechnology
and Science & Technology Department.

PR-474

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ರಾಷ್ಟ್ರೀಯ ಕೂಲಿಗಾಗಿ ಕಾಳು ಯೋಜನೆಯಡಿ 2004-05ನೇ ಸಾಲಿನಲ್ಲಿ ಬಿಡುಗಡೆಯಾದ ಆಹಾರಧಾನ್ಯಗಳ ಸಾಗಾಣಿಕೆ ವೆಚ್ಚಕ್ಕಾಗಿ ಎಸ್‌ಜಿಆರ್‌ವೈ ಯೋಜನೆಯ ಲೆಕ್ಕಶೀರ್ಷಿಕೆಯಿಂದ ಅನುದಾನ ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಪ್ರಸ್ತಾವನೆ:**

2004-05ನೇ ಸಾಲಿನಲ್ಲಿ ರಾಷ್ಟ್ರೀಯ ಕೂಲಿಗಾಗಿ ಕಾಳು ಯೋಜನೆಯಡಿ ಒಟ್ಟು 30038 ಟನ್‌ಗಳ ಆಹಾರ ಧಾನ್ಯವನ್ನು ಬೀದರ್, ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳಿಗೆ ಯೋಜನೆಯ ಕಾರ್ಯಕ್ರಮಗಳ ಬಳಕೆಗಾಗಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುತ್ತದೆ. ಸದರಿ ಸಾಲಿನಲ್ಲಿ ಬಿಡುಗಡೆಯಾದ ಆಹಾರ ಧಾನ್ಯಗಳ ಸಾಗಾಣಿಕೆ ವೆಚ್ಚಕ್ಕೆ ಈವರೆಗೂ ಅನುದಾನವನ್ನು ಬಿಡುಗಡೆ ಮಾಡಿರುವುದಿಲ್ಲ. ಸದರಿ ಯೋಜನೆಯಡಿ ಅನುದಾನವನ್ನು ಬಿಡುಗಡೆ ಮಾಡಲು, ಪ್ರತ್ಯೇಕವಾದ ಲೆಕ್ಕಶೀರ್ಷಿಕೆಯನ್ನು ಅನುದಾನದೊಂದಿಗೆ ಒದಗಿಸದೇ ಇರುವುದರ ಕಾರಣ ಆರ್ಥಿಕ ಇಲಾಖೆಯವರು ತಮ್ಮ ಟಿಪ್ಪಣಿ ಸಂಖ್ಯೆ: ಆಇ.1332 ವೆಚ್ಚ- 6.2005 ದಿನಾಂಕ: 22.08.2005ರಲ್ಲಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ಒದಗಿಸಲಾದ ಅನುದಾನದಿಂದ, ಈ ರಾಷ್ಟ್ರೀಯ ಕೂಲಿಗಾಗಿ ಕಾಳು ಯೋಜನೆಯ ಆಹಾರಧಾನ್ಯಗಳ ಸಾಗಾಣಿಕೆ ವೆಚ್ಚವನ್ನು ಭರಿಸಲು

ಅಭಿಪ್ರಾಯವನ್ನು ನೀಡಿರುತ್ತದೆ. ಸದ್ಯ, ಬೀದರ್, ದಾವಣಗೆರೆ ಮತ್ತು ಚಿತ್ರದುರ್ಗ ಜಿಲ್ಲೆಗಳಿಗೆ ಅನುಬಂಧದಲ್ಲಿ ನಮೂದಿಸಿರುವಂತೆ, ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ.65 ಎಸ್‌ಜಿಆರ್‌ವೈ 2005, ಬೆಂಗಳೂರು, ದಿನಾಂಕ: 15ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, 2004-05ನೇ ಸಾಲಿನಲ್ಲಿ ರಾಷ್ಟ್ರೀಯ ಕೂಲಿಗಾಗಿ ಕಾಳು ಯೋಜನೆಯಡಿ ಬಿಡುಗಡೆಯಾದ ಆಹಾರಧಾನ್ಯಗಳ ಪ್ರಮಾಣದ ಸಾಗಾಣಿಕೆ ವೆಚ್ಚಕ್ಕಾಗಿ ರೂ.116.83 ಲಕ್ಷಗಳನ್ನು (ರೂ. ಒಂದು ಕೋಟಿ ಹದಿನಾರು ಲಕ್ಷದ ಎಂಭತ್ತು ಮೂರು ಸಾವಿರಗಳು ಮಾತ್ರ) ಅನುಬಂಧದಲ್ಲಿ ತೋರಿಸಿದಂತೆ ಬೀದರ್, ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳಿಗೆ ಪ್ರಚಲಿತ ವರ್ಷದ ಆಯವ್ಯಯದಲ್ಲಿ ಜಿಲ್ಲಾ ಪಂಚಾಯತಿಗಳಿಗಾಗಿ ಒದಗಿಸಲಾದ ಶೇಕಡಾ 20ರ ಭಾಗಾಂಶದ ಉಪ ಲೆಕ್ಕಶೀರ್ಷಿಕೆ 196ರ ಅನುದಾನದಿಂದ ಬಿಡುಗಡೆ ಮಾಡಿದೆ.

ಜಿಲ್ಲಾಧಿಕಾರಿಗಳು ಟೆಂಡರ್ ದರದಲ್ಲಿ ನಿರ್ಧರಿಸಿದ ಆಹಾರಧಾನ್ಯಗಳ ಸಾಗಾಣಿಕೆ ವೆಚ್ಚದ ಹಣವನ್ನು ಮತ್ತು ಪ್ರತಿ ಕ್ವಿಂಟಾಲ್‌ಗೆ ತಗಲುವ ರೂ.13/- ಗಳ ಸೇವಾ ವೆಚ್ಚವನ್ನು ಕರ್ನಾಟಕ ರಾಜ್ಯ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ ಇವರು ಭಾರತ ಆಹಾರ ನಿಗಮದ ಗೋಧಾಮುಗಳಿಂದ ಎತ್ತುವಳಿ ಹಾಗೂ ಸಾಗಾಣಿಕೆ ಮಾಡಿದ ಆಹಾರಧಾನ್ಯಗಳ ಪ್ರಮಾಣಕ್ಕೆ ಅನುಸಾರವಾಗಿ ಪಾವತಿಸಲು ಬೀದರ್/ ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಆದೇಶಿಸಿದೆ.

ಸದರಿ ವೆಚ್ಚವನ್ನು ಈ ಕೆಳಗೆ ನಮೂದಿಸಲಾದ ಲೆಕ್ಕಶೀರ್ಷಿಕೆಯಿಂದ ಭರಿಸತಕ್ಕದ್ದು. ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು/ ಮುಖ್ಯ ಲೆಕ್ಕಾಧಿಕಾರಿಗಳು ಬಿಡುಗಡೆ ಮಾಡಲಾದ ಅನುದಾನವನ್ನು ಖಜಾನೆಯಿಂದ ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ: ಎಫ್‌ಡಿ/ 7/ ಜೆಡ್‌ಪಿಎ/ 2003 ಬೆಂಗಳೂರು, ದಿನಾಂಕ: 14.07.2005ರನ್ವಯ ಪಡೆದು ವೆಚ್ಚವನ್ನು ನಿರ್ವಹಣೆ ಮಾಡುವುದು. ಬಿಡುಗಡೆಯಾದ ಅನುದಾನವನ್ನು ಕೂಡಲೇ ನಗದೀಕರಿಸಿಕೊಂಡು ಸಾಗಾಣಿಕೆ ವೆಚ್ಚದ ಹಣವನ್ನು ಕರ್ನಾಟಕ ರಾಜ್ಯ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ ಇವರಿಗೆ ಪಾವತಿಸಲು ಆದೇಶಿಸಿದೆ.

ಜಿಲ್ಲಾ ಪಂಚಾಯತ್ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-196 ಜಿಲ್ಲಾ ಪಂಚಾಯತಿಗಳಿಗೆ ಸಹಾಯ-1 ಜಿಲ್ಲಾ ಪಂಚಾಯತಿಗಳು-04-ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (2505-60-196-1-04) 2005-06 (ಜಿಲ್ಲಾ ಪಂಚಾಯತಿ)"

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಗ್ರಾಅಪ. 133, ಪಿಬಿಎಸ್ 2006, ದಿನಾಂಕ: 08.03.2006ರಲ್ಲಿ ನೀಡಿದ ಸಹಮತಿಯಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು,
ಸ್ವ ಉದ್ಯೋಗ ಕಾರ್ಯಕ್ರಮಗಳು
ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ANNEXURE**

**Government Order No. RDP:65:SGRY:2005, Bangalore, Dated: 15.03.2006**

Statement showing the release of funds towards the transportation cost of the foodgrains released under NFFWP during 2004-05 to Bidar, Chitradurga and Davanagere districts.

(Rs.in lakhs)

| Sl. No. | District | Object Code | Quantity of food grains | Funds being released |
|---|---|---|---|---|
| 1. | Bidar | 419 | 9158 | 39.945 |
| 2. | Chitradurga | 403 | 10738 | 39.975 |
| 3. | Davanagere | 451 | 10142 | 36.910 |
| | **Total** | | **30038** | **116.830** |

**G.B. HIREMANIYAVAR**
Director
Self Employment Programmes
& E/o Dy. Secretary to Government,
Rural Development & Panchayat Raj Department.

PR-478

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ಉತ್ತರ ಕನ್ನಡ ಜಿಲ್ಲಾ ಪಂಚಾಯತಿಯ ಕುಮಟಾ ಬ್ಲಾಕ್‌ನಲ್ಲಿ ಎಸ್.ಜಿ.ಎಸ್.ವೈ ಕ್ರಿಯಾ ಯೋಜನೆಗೆ 2005-2006 ನೇ ಸಾಲಿನ ರಾಜ್ಯದ ಪಾಲಿನ ಹಣವನ್ನು ಬಿಡುಗಡೆ ಮಾಡುವ ಬಗ್ಗೆ.

**ಪ್ರಸ್ತಾವನೆ:**

ಉತ್ತರ ಕನ್ನಡ ಜಿಲ್ಲಾ ಪಂಚಾಯತಿಯ ಕುಮಟಾ ಬ್ಲಾಕ್‌ನಲ್ಲಿ ಬ್ಯಾಂಕ್ ನಿರ್ವಹಣೆಯ ರಾಷ್ಟ್ರೀಯ ಸಂಸ್ಥೆ (NIBM) ಮುಖಾಂತರ ಕ್ರಿಯಾ ಸಂಶೋಧನಾ ಯೋಜನೆಯನ್ನು 2003-04ನೇ ಸಾಲಿನಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಯೋಜನಾ ಅವಧಿಯು ಮೂರು ವರ್ಷಗಳದ್ದಾಗಿದ್ದು 2005-06ನೇ ಸಾಲಿಗೆ ಪೂರ್ಣಗೊಳ್ಳಲಿದೆ. ಈ ಯೋಜನೆಯನ್ನು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯನ್ವಯ ಅನುಷ್ಠಾನಗೊಳಿಸಲಾಗುತ್ತಿದೆ. ಕೇಂದ್ರ ಸರ್ಕಾರವು ಪತ್ರ ಸಂಖ್ಯೆ 28012/76/2002-ಎಸ್‌ಜಿ ಎಸ್‌ವೈ -III (196), ದಿನಾಂಕ: 21ನೇ

ಮಾರ್ಚ್ 2005ರಂದು ರೂ. 17,75,000/- (ರೂಪಾಯಿ ಹದಿನೇಳು ಲಕ್ಷದ ಎಪ್ಪತ್ತೈದು ಸಾವಿರ ಮಾತ್ರ) ಗಳನ್ನು ಬಿಡುಗಡೆ ಮಾಡಿದೆ. ಸದರಿ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು 75:25ರ ಅನುಪಾತದಲ್ಲಿ ಕ್ರಮವಾಗಿ ಅನುದಾನವನ್ನು ಬಿಡುಗಡೆ ಮಾಡುತ್ತವೆ. ಸದರಿ ಯೋಜನೆಯ ಅನುಷ್ಠಾನಕ್ಕೆ ಅನುದಾನ ಬಿಡುಗಡೆ ಮಾಡುವಂತೆ ಕೋರಿ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು, ಉತ್ತರ ಕನ್ನಡ ಜಿಲ್ಲಾ ಪಂಚಾಯತಿಯವರು ತಮ್ಮ ಪತ್ರ ಸಂಖ್ಯೆ ಜಿಪಂ/ಅಭಿವೃದ್ಧಿ/ಎಸ್‌ಜಿಎಸ್‌ವೈ/ಎಆರ್‌ಪಿ/ಸಿಆರ್-13/2005-06, ದಿನಾಂಕ: 18-01-2006ರಲ್ಲಿ ರೂ.5,91,700 ಹಣ ಬಿಡುಗಡೆ ಮಾಡಲು ಕೋರಿದ್ದು, ಇದರನ್ವಯ ರಾಜ್ಯದ ಪಾಲಿನ ಹಣ ರೂ. 5,92,000/- (ರೂಪಾಯಿ ಐದು ಲಕ್ಷದ ತೊಂಬತ್ತೆರಡು ಸಾವಿರ ಮಾತ್ರ) ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ :

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 9 ಸ್ವಜಯೋ 2006, ಬೆಂಗಳೂರು, ದಿನಾಂಕ 23ನೇ ಮಾರ್ಚ್, 2006**

ಮೇಲೆ ವಿವರಿಸಿರುವ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ರಾಜ್ಯ ಸರ್ಕಾರವು ಉತ್ತರ ಕನ್ನಡ ಜಿಲ್ಲಾ ಪಂಚಾಯತ್‌ನ ಕುಮಟಾ ಬ್ಲಾಕ್‌ನಲ್ಲಿ, ಎಸ್.ಜಿ.ಎಸ್.ವೈ ಅಡಿ ಎನ್.ಐ.ಬಿ.ಎಂ. ಮುಖಾಂತರ ಜಾರಿಗೊಳಿಸುತ್ತಿರುವ ಕ್ರಿಯಾ ಸಂಶೋಧನಾ ಯೋಜನೆ ಅನುಷ್ಠಾನಕ್ಕಾಗಿ ರಾಜ್ಯದ ಪಾಲಿನ ಹಣ ರೂ. 5,92,000/- (ರೂಪಾಯಿ ಐದು ಲಕ್ಷದ ತೊಂಬತ್ತೆರಡು ಸಾವಿರ ಮಾತ್ರ) ಗಳನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ ಸಂ | ಜಿಲ್ಲಾ ಪಂಚಾಯತ್ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರದಿಂದ ಬಿಡುಗಡೆ ಯಾದ ಅನುದಾನ | ರಾಜ್ಯ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಹಣ |
|---|---|---|---|---|---|
| 1 | ಉತ್ತರ ಕನ್ನಡ | 416 | 3000ZZ0080 | 17,75,000 | 5,92,000 |

**ಷರತ್ತುಗಳು ಕೆಳಕಂಡಂತಿವೆ:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದಲ್ಲಿ ನಡುವೆ 75 : 25 ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-198- ಗ್ರಾಮ ಪಂಚಾಯತ್‌ಗಳಿಗೆ ಸಹಾಯ-1-ಗ್ರಾಮ ಪಂಚಾಯತ್‌ಗಳು-01-ಬ್ಲಾಕ್ ಅನುದಾನ (ಯೋಜನೆ) (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2005-2006 (2501-01-198-1-01) ರಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಜಡ್‌ಪಿಎ 2003 ದಿನಾಂಕ 14-07-2005 ರನ್ವಯ ಸಂಬಂಧಿಸಿದ ಏಜೆನ್ಸಿಗೆ ಚೆಕ್ ಮೂಲಕ ಬಿಡುಗಡೆ ಮಾಡುವುದು.

ಉತ್ತರ ಕನ್ನಡ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ ಹಾಗೂ ಸಂಬಂಧಿಸಿದ ಏಜೆನ್ಸಿಗೆ ಹಣವನ್ನು ಬಿಡುಗಡೆ ಮಾಡುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಕ್ರಿಯಾ ಸಂಶೋಧನಾ ಯೋಜನೆಯ ಆರಂಭದಿಂದ ಇಲ್ಲಿಯವರೆಗಿನ ಪ್ರಗತಿಯನ್ನು ನಿರ್ದೇಶಕರು {ಸ್ವಉಕಾ}, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಉತ್ತರ ಕನ್ನಡ, ಜಿಲ್ಲಾ ಪಂಚಾಯತ್ ಇವರು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ ಗ್ರಾಅಪ 137 ಪಿಬಿಎಸ್ 2006 ದಿನಾಂಕ 22-03-2006 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು,
ಸ್ವ ಉದ್ಯೋಗ ಕಾರ್ಯಕ್ರಮಗಳು
ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

ಪಿ.ಆರ್.484

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** 2003-04ನೇ ಸಾಲಿನಿಂದ ಬಾಕಿ ಇರುವ ಗಣಕೀಕರಣ ಬಿಲ್ಲುಗಳ ಪಾವತಿಗೆ ಹಣ ಬಿಡುಗಡೆಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಆಯುಕ್ತರವರ ಪತ್ರ ಸಂಖ್ಯೆ: ಎಫ್‌ಎಸ್:ಬಿಡಯುಡಿ:1:2005-06, ದಿ:19.9.2005 ಮತ್ತು 24.3.2006.

2) ಸರ್ಕಾರದ ಆದೇಶ ಸಂಖ್ಯೆ: ಆನಾಸ 114 ಡಿಆರ್‌ಎ 2004, ದಿ:10.1.2005 ಮತ್ತು 17.1.2006.

ಪ್ರಸ್ತಾವನೆ:

ರಾಜ್ಯದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳನ್ನು ಗುರುತಿಸಲು, ಮನೆ ಮನೆ ಪುನರ್ ಸಮೀಕ್ಷೆಯನ್ನು ಕೈಗೊಳ್ಳಲು ಸರ್ಕಾರವು ಮೇಲ್ಕಂಡ ಆದೇಶಗಳನ್ನು ಹೊರಡಿಸಿದೆ. ಈ ಹಿನ್ನೆಲೆಯಲ್ಲಿ ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಆಯುಕ್ತರು, ಪಡಿತರ ಚೀಟಿಗಳನ್ನು ಗಣಕೀಕೃತಗೊಳಿಸಿ, ಅರ್ಹ ಎಲ್ಲಾ ಫಲಾನುಭವಿಗಳಿಗೆ ವಿತರಿಸಲು ಒಂದು ಬೃಹತ್ ಕಾರ್ಯಕ್ರಮವೊಂದನ್ನು ಹಮ್ಮಿಕೊಂಡಿದ್ದು, ಆ ನಿಟ್ಟಿನಲ್ಲಿ ಗಣಕೀಕೃತ ಪಡಿತರ ಚೀಟಿಗಳನ್ನು ಮುದ್ರಿಸಲು ಖಾಸಗಿ ಸಂಸ್ಥೆಗಳೊಂದಿಗೆ ಒಡಂಬಡಿಕೆಯನ್ನು ಮಾಡಿಕೊಂಡಿದ್ದು, ಈ ಪ್ರಕ್ರಿಯೆಯು 2003-04ರಿಂದ ಚಾಲ್ತಿಯಲ್ಲಿದ್ದು, ಸದರಿ ಸಂಸ್ಥೆಗಳಿಗೆ ಹಣವನ್ನು ಪಾವತಿಸಲು ಬಾಕಿಯಿದ್ದು, ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ (1)ರ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯಲ್ಲಿ ಲೆಕ್ಕ ಶೀರ್ಷಿಕೆ **2408-01-800-0-06ರಲ್ಲಿ** ಗಣಕೀಕೃತ ಹಳದಿ ಕಾರ್ಡುಗಳ ಉಪ ಶೀರ್ಷಿಕೆ 059- ಇತರೆ ಖರ್ಚುಗಳಡಿ ರೂ.500.00 ಲಕ್ಷಗಳನ್ನು ಅನುದಾನವನ್ನು ನಿಗದಿ ಮಾಡಲಾಗಿತ್ತು. ತದನಂತರ, ಈ ಅನುದಾನವನ್ನು ರೂ.150.00 ಲಕ್ಷಗಳಿಗೆ ಮಿತಿ ಗೊಳಿಸಲಾಗಿದೆ. ಈ ಹಿನ್ನೆಲೆಯಲ್ಲಿ ಅನುದಾನ ಮಿತಿಗೊಳಿಸಿದ್ದರಿಂದ, 2003-04ನೇ ಸಾಲಿನ ಮುದ್ರಣಾಲಯಾದ ಬಿಲ್ಲುಗಳನ್ನು ಹಾಗೆಯೇ ಬಾಕಿ ಉಳಿಸಿಕೊಳ್ಳಲಾಗಿತ್ತು. ಹಾಗೆಯೇ ಗಣಕೀಕೃತ ಹಳದಿ ಕಾರ್ಡುಗಳ ಉಪ ಶೀರ್ಷಿಕೆಯಡಿ ಯಾವುದೇ ಅನುದಾನ ಮಂಜೂರಾಗದ ಕಾರಣ ಇತರೆ ವೆಚ್ಚಗಳಡಿ ರೂ.10.00 ಲಕ್ಷಗಳ ಅನುದಾನ ಮಂಜೂರು ಮಾಡಿದ್ದು, 2003-04ನೇ ಸಾಲಿನಲ್ಲಿ ಬಾಕಿ ಉಳಿದ ಗಣಕೀಕರಣ ಬಾಕಿ ಬಿಲ್ಲುಗಳನ್ನು ಪಾವತಿ ಮಾಡಲು ಅನುದಾನ ಕೊರತೆಯುಂಟಾಯಿತೆಂದು ವರದಿ ಮಾಡುತ್ತಾ, ಸದರಿ ಲೆಕ್ಕ ಶೀರ್ಷಿಕೆಯಡಿ ಒಟ್ಟು ರೂ. 4,72,63,941-00ಗಳ ಬಿಲ್ಲುಗಳು ಬಾಕಿ ಪಾವತಿಗಾಗಿ ಉಳಿದಿದ್ದು, 2004-05ನೇ ಸಾಲಿನಲ್ಲಿ ಕೇವಲ ರೂ.100.00 ಲಕ್ಷಗಳ ಅನುದಾನವನ್ನು ಬಿಡುಗಡೆಗೊಳಿಸಿದ್ದರಿಂದ, ಅದರಲ್ಲಿ ರೂ.96,90,574.00ಗಳನ್ನು ಪಾವತಿಸಿದ್ದು, ಉಳಿಕೆಯಾಗಿ ರೂ.3,75,73,367.00 ಬಿಲ್ಲುಗಳ ಬಾಕಿಯಿರುವುದಾಗಿ ತಿಳಿಸುತ್ತಾ, ಹಾಗೆಯೇ ಮನೆ ಮನೆ ಸಮೀಕ್ಷೆಯ ಬಾಕಿ ಬಿಲ್ಲುಗಳ ಮೊತ್ತ ರೂ. 18.20 ಲಕ್ಷಗಳುಬಾಕಿಯಿದ್ದು, ಒಟ್ಟಾರೆಯಾಗಿ ರೂ. 394.00 ಲಕ್ಷಗಳ ಹೆಚ್ಚುವರಿ ಅನುದಾನವನ್ನು 2005-06ನೇ ಸಾಲಿನ ಪೂರಕ ಅಂದಾಜಿನಲ್ಲಿ ಬಿಡುಗಡೆಗೊಳಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 169 ಇಭತ 05, ಬೆಂಗಳೂರು, ದಿನಾಂಕ: 29ನೇ ಮಾರ್ಚ್, 2006**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಆಯುಕ್ತರು, ಬೆಂಗಳೂರು ರವರು ಇಲಾಖೆಯಲ್ಲಿ ಬಾಕಿ ಉಳಿದಿರುವ ಗಣಕೀಕೃತ ಹಳದಿ ಕಾರ್ಡುಗಳ ಬಾಕಿ ಬಿಲ್ಲುಗಳ ಪಾವತಿಗಾಗಿ 2005-06ನೇ ಸಾಲಿನ ಪೂರಕ ಅಂದಾಜಿಗಳು(3ನೇ ಹಾಗೂ ಅಂತಿಮ ಕಂತು) ಲೆಕ್ಕ ಶೀರ್ಷಿಕೆ **2408-01-001-0-01ರಡಿ** ಉಪ ಶೀರ್ಷಿಕೆ 059 -ಇತರೆ ಖರ್ಚುಗಳಡಿ ರೂ.373.00 ಲಕ್ಷ ಗಳು(ಮೂರು ಕೋಟಿ ಮತ್ತು ಎಪ್ಪತ್ತು ಮೂರು ಲಕ್ಷ ರೂಪಾಯಿಗಳು ಮಾತ್ರ) ಬಿಡುಗಡೆಗೊಳಿಸಿದೆ.

2. ಮೇಲ್ಕಂಡ ಲೆಕ್ಕ ಶೀರ್ಷಿಕೆಯಡಿ ಬಿಡುಗಡೆಗೊಳಿಸಲಾದ ಹಣವನ್ನು ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಆಯುಕ್ತರ ಕಛೇರಿಯಲ್ಲಿನ ಮುಖ್ಯಲೆಕ್ಕಾಧಿಕಾರಿಗಳು ತಯಾರಿಸಿದ ಸ್ವೀಕರ್ತನ ರಸೀದಿ(Payees Receipt) ಮೇಲೆ ಆಯುಕ್ತರ ಮೇಲು ರುಜುವಿನೊಂದಿಗೆ ಖಜಾನೆಯಿಂದ ಡ್ರಾ ಮಾಡತಕ್ಕದ್ದು ಮತ್ತು ಆಯುಕ್ತರ ಪಿ.ಡಿ. ಖಾತೆಯಲ್ಲಿ ಜೂನ್, 2006ರವರೆಗೆ ತೆಗೆದಿರಿಸಿಕೊಳ್ಳತಕ್ಕದ್ದು. ಹಾಗೂ ಮೇಲೆ ತಿಳಿಸಿದ ಬಿಲ್ಲುಗಳಿಗೆ ಈ ಅವಧಿಯಲ್ಲಿ ಹಣವನ್ನು ಸಂಬಂಧಿಸಿದವರಿಗೆ ಪಾವತಿ ಮಾಡಲು ಕಟ್ಟುನಿಟ್ಟಿನ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು. ತದನಂತರ, ಸಾದಿಲ್ವಾರು ಲೆಕ್ಕದ ವಿವರಗಳನ್ನು ಮೇಲೆ ನಿಗದಿಪಡಿಸಿದ ಅವಧಿಯಲ್ಲಿ ಸರ್ಕಾರಕ್ಕೆ ತಪ್ಪದೇ ಸಲ್ಲಿಸುವುದು.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ತನ್ನ ಅನಧಿಕೃತ ಟಿಪ್ಪಣಿ ಸಂ: ಎಫ್‌ಡಿ 179 ವೆಚ್ಚ-9/2005, ದಿ:29.3.2006ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವನಂಜಯ್ಯ**

ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್.507

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ ಗುಲ್ಬರ್ಗಾ ಜಿಲ್ಲೆಯ 10 ಜೀತವಿಮುಕ್ತರಿಗೆ 2005-06ನೇ ಸಾಲಿನಲ್ಲಿ ಸಹಾಯಧನ ಬಿಡುಗಡೆ ಕುರಿತು.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ. 15. ಆರ್‌ಬಿಎಲ್. 2004, ದಿನಾಂಕ: 21.01.2006.

(2) ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಪತ್ರಸಂ.ಕಂ.ಎಂಎಜಿ.337. 2005-06/ 27458 ದಿನಾಂಕ: 24.02.2006.

(3) ಯಾದಗಿರಿ ಉಪವಿಭಾಗಾಧಿಕಾರಿಗಳ ಆದೇಶ ಸಂಖ್ಯೆ: ದಂಡ/ ಜೀತವಿಮುಕ್ತಿ/ 9/ 2003-04 ದಿನಾಂಕ: 01.03.2006.

(4) ಸರ್ಕಾರದ ಸಮಸಂಖ್ಯೆಯ ಆದೇಶದ ದಿನಾಂಕ: 22.03.2006.

**ಪ್ರಸ್ತಾವನೆ:**

ಜೀತಕಾರ್ಮಿಕರನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ನಂತರ, ಅವರುಗಳಿಗೆ ಕನಿಷ್ಠ ಆರ್ಥಿಕ ಸವಲತ್ತನ್ನು ಒದಗಿಸುವ ಉದ್ದೇಶದಿಂದ ರಾಜ್ಯ ಸರ್ಕಾರವು "ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆ" ಎಂಬ ಹೊಸ ಯೋಜನೆಯನ್ನು ರೂಪಿಸಿದ್ದು, ದಿನಾಂಕ: 21.01.2006 ರಿಂದ ಈ ಯೋಜನೆಯನ್ನು ರಾಜ್ಯಾದ್ಯಂತ ಜಾರಿಗೆ ತರಲಾಗಿದೆ. ಈ ಯೋಜನೆಯಡಿ ರೂಪಿಸಿರುವ ನಿರ್ದೇಶನದಂತೆ, ಜೀತಪದ್ಧತಿಯಿಂದ

ಬಿಡುಗಡೆಗೊಳಿಸುವ ಪ್ರತಿ ಜೀತಕಾರ್ಮಿಕ/ ಬಾಲ ಜೀತಕಾರ್ಮಿಕರಿಗೆ ಮಾಹೆಯಾನ ರೂ.300.00 ರಂತೆ ಸಹಾಯಧನವನ್ನು 24 ತಿಂಗಳುಗಳ ಅವಧಿಗೆ ಪಾವತಿಸಬೇಕಾಗುತ್ತದೆ.

2. ಮೇಲೆ ಓದಲಾದ ಕ್ರ.ಸಂ. (4)ರ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಯ ಯಾದಗಿರಿ ತಾಲ್ಲೂಕಿನ ಎಲ್ಲೇರಿ ಗ್ರಾಮದ 10 ಜೀತವಿಮುಕ್ತರಿಗೆ ಈ ಯೋಜನೆಯಡಿ ಸಹಾಯಧನ ಒದಗಿಸಲು 2005-06ನೇ ಸಾಲಿನಲ್ಲಿ ಒಂದು ತಿಂಗಳ (ಮಾರ್ಚ್) ಅವಧಿಗೆ ಮಾತ್ರ ಒಟ್ಟು ರೂ. 3000.00ಗಳ ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ. ಇಲಾಖಾ ಪ್ರಧಾನ ಕಾರ್ಯದರ್ಶಿಯವರು ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಗುಲ್ಬರ್ಗಾ ಜಿಲ್ಲಾ ಪಂಚಾಯತಿಗೆ ಈ ಯೋಜನೆಯಡಿ ಒದಗಿಸಿರುವ ಅನುದಾನ ಪೈಕಿ ಲಭ್ಯವಿರುವ ಮೊತ್ತದಲ್ಲಿ 2006-07ನೇ ಸಾಲಿನ ಅವಧಿಗೆ ಅವಶ್ಯ ಸಹಾಯಧನವನ್ನು ಈ ಸಾಲಿನಲ್ಲೇ ಬಿಡುಗಡೆಗೊಳಿಸುವಂತೆ ಆದೇಶಿಸಿರುತ್ತಾರೆ. ಅದರಂತೆ ಗುಲ್ಬರ್ಗಾ ಜಿಲ್ಲಾ ಪಂಚಾಯತಿಗೆ ಈ ಯೋಜನೆಯಡಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ರಾಜ್ಯ ಪಾಲಿನ ಅನುದಾನ ರೂ.0.10 ಲಕ್ಷ ಪೈಕಿ ರೂ.0.07 ಲಕ್ಷ ಲಭ್ಯವಿದ್ದು, ಈ ಪೈಕಿ ಸದರಿ 10 ಜೀತ ವಿಮುಕ್ತರಿಗೆ 2006-07ನೇ ಸಾಲಿನ ಎರಡು ತಿಂಗಳುಗಳ (ಏಪ್ರಿಲ್, ಮೇ) ಅವಧಿಗೆ ಮಾಹೆಯಾನ ರೂ.300.00 ರಂತೆ ಸಹಾಯಧನಕ್ಕಾಗಿ ತಗಲುವ ರೂ.0.06 ಲಕ್ಷ ಅನುದಾನವನ್ನು ಈ ಸಾಲಿನಲ್ಲಿ ಬಿಡುಗಡೆಗೊಳಿಸಲು ಸರ್ಕಾರವು ನಿರ್ಧರಿಸಿರುತ್ತದೆ.

ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 4 ಆರ್‌ಬಿಎಲ್ 2004, ಬೆಂಗಳೂರು, ದಿನಾಂಕ: 28ನೇ ಮಾರ್ಚ್, 2006**

ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆ ಅನ್ವಯ ಗುಲ್ಬರ್ಗಾ ಜಿಲ್ಲೆ ಯಾದಗಿರಿ ತಾಲ್ಲೂಕು ಎಲ್ಲೇರಿ ಗ್ರಾಮದ 10 ಜೀತವಿಮುಕ್ತರಿಗೆ ತಲಾ ಮಾಹೆಯಾನ ರೂ.300.00ರಂತೆ 2006-07ನೇ ಸಾಲಿನ ಎರಡು ತಿಂಗಳುಗಳ (ಏಪ್ರಿಲ್, ಮೇ) ಅವಧಿಗೆ ಸಹಾಯ ಧನ ಪಾವತಿಸಲು ಒಟ್ಟು ರೂ. 6000.00ಗಳನ್ನು (ಆರುಸಾವಿರ ರೂಪಾಯಿಗಳು ಮಾತ್ರ) ಗುಲ್ಬರ್ಗಾ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗೆ ಬಿಡುಗಡೆ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ.

2. ಈ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230- ಕಾರ್ಮಿಕ ಮತ್ತು ಉದ್ಯೋಗ-01-ಕಾರ್ಮಿಕ-198-ಗ್ರಾಮ ಪಂಚಾಯತಿಗಳಿಗೆ ಸಹಾಯ-1 ಗ್ರಾಮ ಪಂಚಾಯತಿಗಳು-01-ಬ್ಲಾಕ್ ಅನುದಾನ (ಜೀತದಾಳುಗಳ ಪುನರ್ವಸತಿ) (ಯೋಜನೆ)ಗೆ ಜಮಾ ಮಾಡತಕ್ಕದ್ದು.

3. ಸಕಾರದ ಆದೇಶ ಸಂಖ್ಯೆ: ಸಂ.ಗ್ರಾಅಪ 15. ಆರ್‌ಬಿಎಲ್. 2004 ದಿನಾಂಕ: 21.01.2006ರಲ್ಲಿನ ಎಲ್ಲಾ ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸತಕ್ಕದ್ದು.

4. ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂಖ್ಯೆ: ಗ್ರಾಅಪ/ 190/ ಪಿಬಿಎಸ್/ 06 ದಿನಾಂಕ: 27.03.2006ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು,
ಸ್ವ ಉದ್ಯೋಗ ಕಾರ್ಯಕ್ರಮಗಳು
ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

ಪಿ.ಆರ್.515

**ವಿಷಯ:** ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ ಗುಲ್ಬರ್ಗಾ ಜಿಲ್ಲೆಯ 10 ಜೀತವಿಮುಕ್ತರಿಗೆ 2005-06ನೇ ಸಾಲಿನಲ್ಲಿ ಸಹಾಯಧನ ಬಿಡುಗಡೆ ಕುರಿತು.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ. 15. ಆರ್‌ಬಿಎಲ್. 2004, ದಿನಾಂಕ: 21.01.2006.

(2) ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಪತ್ರಸಂ.ಕಂ.ಎಂಎಜಿ.337. 2005-06/ 27458 ದಿನಾಂಕ: 24.02.2006.

(3) ಯಾದಗಿರಿ ಉಪವಿಭಾಗಾಧಿಕಾರಿಗಳ ಆದೇಶ ಸಂಖ್ಯೆ: ದಂಡ/ ಜೀತವಿಮುಕ್ತಿ/ 9/ 2003-04 ದಿನಾಂಕ: 01.03.2006.

(4) ಸರ್ಕಾರದ ಸಮಸಂಖ್ಯೆಯ ಆದೇಶದ ದಿನಾಂಕ: 22.03.2006.

**ಪ್ರಸ್ತಾವನೆ:**

ಜೀತಕಾರ್ಮಿಕರನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ನಂತರ, ಅವರುಗಳಿಗೆ ಕನಿಷ್ಠ ಆರ್ಥಿಕ ಸವಲತ್ತನ್ನು ಒದಗಿಸುವ ಉದ್ದೇಶದಿಂದ ರಾಜ್ಯ ಸರ್ಕಾರವು "ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆ" ಎಂಬ ಹೊಸ ಯೋಜನೆಯನ್ನು ರೂಪಿಸಿದ್ದು, ದಿನಾಂಕ: 21.01.2006 ರಿಂದ ಈ ಯೋಜನೆಯನ್ನು ರಾಜ್ಯಾದ್ಯಂತ ಜಾರಿಗೆ ತರಲಾಗಿದೆ. ಈ ಯೋಜನೆಯಡಿ ರೂಪಿಸಿರುವ ನಿರ್ದೇಶನದಂತೆ, ಜೀತಪದ್ಧತಿಯಿಂದ ಬಿಡುಗಡೆಗೊಳಿಸುವ ಪ್ರತಿ ಜೀತಕಾರ್ಮಿಕ/ ಬಾಲ ಜೀತಕಾರ್ಮಿಕರಿಗೆ ಮಾಹೆಯಾನ ರೂ.300.00 ರಂತೆ ಸಹಾಯಧನವನ್ನು 24 ತಿಂಗಳುಗಳ ಅವಧಿಗೆ ಪಾವತಿಸಬೇಕಾಗುತ್ತದೆ.

2. ಗುಲ್ಬರ್ಗಾ ಜಿಲ್ಲೆಯ ಜಿಲ್ಲಾಧಿಕಾರಿಗಳು ಮೇಲೆ ಓದಲಾದ ಕ್ರ.ಸಂ. (2)ರ ಪತ್ರದಲ್ಲಿ "ಯಾದಗಿರಿ ತಾಲ್ಲೂಕಿನ ಎಲ್ಲೇರಿ ಗ್ರಾಮದಲ್ಲಿ ಕಂಡುಬಂದಿರುವ ಜೀತಪ್ರಕರಣ ಸಂಬಂಧ 11 ಜೀತಕಾರ್ಮಿಕರನ್ನು ವಿಮುಕ್ತಿಗೊಳಿಸುವಂತೆ ಹಾಗೂ 2 ಸಂಶಯಾಸ್ಪದ ಜೀತ ಕಾರ್ಮಿಕರ ಬಗ್ಗೆ ವಿಚಾರಣೆ ಕೈಗೊಳ್ಳುವಂತೆ" ತಿಳಿಸಿರುತ್ತಾರೆ. ಅದರಂತೆ ಯಾದಗಿರಿ ಉಪವಿಭಾಗಾಧಿಕಾರಿಗಳು ಮೇಲೆ ಓದಲಾದ ಕ್ರ.ಸಂ.(3)ರ ಆದೇಶದಲ್ಲಿ "ಯಾದಗಿರಿ ತಾಲ್ಲೂಕಿನ ಎಲ್ಲೇರಿ ಗ್ರಾಮದ 10 ಜೀತಕಾರ್ಮಿಕರನ್ನು" ವಿಮುಕ್ತಿಗಳಿಸಿರುತ್ತಾರೆ. ಇದಲ್ಲದೇ 1 ಪ್ರಕರಣ ಜೀತಪದ್ಧತಿ ವ್ಯಾಪ್ತಿಗೆ ಒಳಪಡುವುದಿಲ್ಲವೆಂದು ಹಾಗೂ 2 ಸಂಶಯಾಸ್ಪದ ಪ್ರಕರಣಗಳಲ್ಲಿ ವಿಚಾರಣೆ ಕೈಗೊಳ್ಳುತ್ತಿರುವುದಾಗಿ ತಿಳಿಸಿರುತ್ತಾರೆ. ಮೇಲ್ಕಂಡ 10 ಜೀತವಿಮುಕ್ತರಿಗೆ "ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆ" ಅಡಿಯಲ್ಲಿ ಪ್ರಸಕ್ತ (2005-06) ಸಾಲಿನಲ್ಲಿ 1 ತಿಂಗಳ ಅವಧಿಗೆ ಮಾಹೆಯಾನ ರೂ.300.00ರ ಸಹಾಯಧನವನ್ನು ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿರುತ್ತದೆ.

ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 4 ಆರ್‌ಬಿಎಲ್ 2004, ಬೆಂಗಳೂರು, ದಿನಾಂಕ: 22ನೇ ಮಾರ್ಚ್, 2006**

ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆ ಅನ್ವಯ 2005-06ನೇ ಸಾಲಿನಲ್ಲಿ ಗುಲ್ಬರ್ಗಾ ಜಿಲ್ಲೆ ಯಾದಗಿರಿ ತಾಲ್ಲೂಕು ಎಲ್ಲೇರಿ ಗ್ರಾಮದ 10 ಜೀತವಿಮುಕ್ತರಿಗೆ ತಲಾ ಮಾಹೆಯಾನ ರೂ.300.00ರಂತೆ ಸಹಾಯಧನ ಪಾವತಿಸಲು ಒಂದು ತಿಂಗಳ ಅವಧಿಗೆ ಒಟ್ಟು ರೂ.3000.00 ಗಳನ್ನು (ಮೂರು ಸಾವಿರ ರೂಪಾಯಿಗಳು ಮಾತ್ರ) ಗುಲ್ಬರ್ಗಾ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗೆ ಬಿಡುಗಡೆ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ.

2. ಈ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230- ಕಾರ್ಮಿಕ ಮತ್ತು ಉದ್ಯೋಗ-01-ಕಾರ್ಮಿಕ-198-ಗ್ರಾಮ ಪಂಚಾಯತಿಗಳಿಗೆ ಸಹಾಯ-1 ಗ್ರಾಮ ಪಂಚಾಯತಿಗಳು-01-ಬ್ಲಾಕ್ ಅನುದಾನ (ಜೀತದಾಳುಗಳ ಪುನರ್ವಸತಿ) (ಯೋಜನೆ)ಗೆ ಜಮಾ ಮಾಡತಕ್ಕದ್ದು.

3. ಸಕಾರದ ಆದೇಶ ಸಂಖ್ಯೆ: ಸಂ.ಗ್ರಾಅಪ 15. ಆರ್‌ಬಿಎಲ್. 2004 ದಿನಾಂಕ: 21.01.2006ರಲ್ಲಿನ ಎಲ್ಲಾ ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸತಕ್ಕದ್ದು.

4. ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂಖ್ಯೆ: ಗ್ರಾಅಪ/ 187/ ಪಿಬಿಎಸ್/ 06 ದಿನಾಂಕ: 22.03.2006ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು,
ಸ್ವ ಉದ್ಯೋಗ ಕಾರ್ಯಕ್ರಮಗಳು
ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

ಪಿ.ಆರ್.516

**ವಿಷಯ :** ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು 2006-2007 ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ :** ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಮುಂದುವರೆದ ಯೋಜನೆಗಳನ್ನು ಮುಂದುವರೆಸುವ ಬಗ್ಗೆ ದಿನಾಂಕ 01-04-2006 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ ಸಂಖ್ಯೆ ಗ್ರಾಅಪ 80 ಯೋಉಮಾ 2006 ದಿನಾಂಕ 01-04-2006.

**ಪ್ರಸ್ತಾವನೆ :**

ಉಲ್ಲೇಖದಲ್ಲಿ ದಿನಾಂಕ 01-04-2006 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಯೋಜನೆಗಳನ್ನು 2006-07 ನೇ ಸಾಲಿಗೆ ಮುಂದುವರೆಸುವ ಬಗ್ಗೆ ಸಂಬಂಧಪಟ್ಟ ನಿರ್ದೇಶಕರೊಂದಿಗೆ ಚರ್ಚಿಸಲಾಯಿತು. ಈ ಸಂಬಂಧದಲ್ಲಿ 2005-2006 ನೇ ಸಾಲಿನಲ್ಲಿ ಅನುಷ್ಠಾನಗೊಂಡ ಎಲ್ಲಾ ಕಾರ್ಯಕ್ರಮಗಳನ್ನು 2006-2007 ನೇ ಸಾಲಿಗೆ ಮುಂದುವರೆಸಿ ಅನುಷ್ಠಾನಗೊಳಿಸಬೇಕೆಂದು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 3 ಎಸ್‌ಜೆವೈ (ಪ್ರಗತಿ) 2006, ಬೆಂಗಳೂರು, ದಿನಾಂಕ:1ನೇ ಏಪ್ರಿಲ್, 2006**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಕರ್ನಾಟಕ ಸರ್ಕಾರವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು 2006-2007 ನೇ ಸಾಲಿಗೆ ಕೇಂದ್ರ ಸರ್ಕಾರವು ಈ ಯೋಜನೆಗೆ ನಿಗದಿಪಡಿಸಬಹುದಾದ ಅನುದಾನ ಹಾಗೂ ವಿಧಿಸಬಹುದಾದ ಷರತ್ತುಗಳಿಗೆ ಒಳಪಟ್ಟು 2006-2007 ನೇ ಸಾಲಿಗೆ ಮುಂದುವರೆಸಿದೆ.

2006-2007 ನೇ ಸಾಲಿನಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

**ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಲೆಕ್ಕ ಶೀರ್ಷಿಕೆ :** ''2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-198-ಗ್ರಾಮ ಪಂಚಾಯತ್‌ಗಳಿಗೆ ಸಹಾಯ-6-ಗ್ರಾಮ ಪಂಚಾಯತ್‌ಗಳು-01-ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2006-2007 (2501-01-198-6-01)`` ಭರಿಸತಕ್ಕದ್ದು.

**ಡಿಆರ್‌ಡಿಎ (ಆಡಳಿತ) ಲೆಕ್ಕ ಶೀರ್ಷಿಕೆ :** ''2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-6-ಜಿಲ್ಲಾ ಪಂಚಾಯತ್-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ- (ಕೇಂದ್ರ ಪುರಸ್ಕೃತ ಯೋಜನೆ) 2006-2007 (2515-00-196-6-06)`` ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 204 ಪಿಬಿಎಸ್ 2006 ದಿನಾಂಕ 01-04-2006 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು,
ಸ್ವ ಉದ್ಯೋಗ ಕಾರ್ಯಕ್ರಮಗಳು
ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

ಪಿ.ಆರ್.548

**ವಿಷಯ :** 2006-07ನೇ ಸಾಲಿಗೆ ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮವನ್ನು ಮುಂದುವರಿಸುವ ಬಗ್ಗೆ.

**ಉಲ್ಲೇಖ :** (1) ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 18 ಗ್ರಾಇಂಕಾ 2004 ದಿ:17.06.2004 ಮತ್ತು 20.07.2004.

(2) ಸರ್ಕಾರಿ ಆದೇಶ ಸಂಖ್ಯೆ :ಗ್ರಾಅಪ 24 ಗ್ರಾಇಂಕಾ 2005 ದಿನಾಂಕ 15.07.2005.

**ಪ್ರಸ್ತಾವನೆ :**

ದಿನಾಂಕ 01.04.2006 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ರವರ ಅಧ್ಯಕ್ಷತೆಯಲ್ಲಿ ನಡೆದ ಮುಂದುವರಿದ ಕಾರ್ಯಕ್ರಮಗಳ ಮಂಜೂರಾತಿ ನೀಡುವ ಸಭೆಯ ನಡವಳಿಯನ್ವಯ 2006-07ನೇ ಸಾಲಿಗೆ ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮವನ್ನು ಮುಂದುವರಿಸಲು ನಿರ್ಣಯ ಕೈಗೊಳ್ಳಲಾಗಿದೆ.

ಉಲ್ಲೇಖ(2)ರ ಸರ್ಕಾರಿ ಅದೇಶದಲ್ಲಿ ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮವನ್ನು 01.04.2005 ರಿಂದ 31.03.2006ರವರೆಗೆ ಮುಂದುವರಿಸಲು ಅನುಮೋದನೆ ನೀಡಲಾಗಿತ್ತು.

2006-07ನೇ ಸಾಲಿನ ರಾಜ್ಯ ಆಯವ್ಯಯದಡಿ ರಾಜ್ಯ ಹಾಗೂ ಕೇಂದ್ರ ಸರ್ಕಾರಗ ಪಾಲು ಒಟ್ಟಾರೆ ರೂ.530.00 ಲಕ್ಷ, BERI ಯೋಜನೆಗಾಗಿ ಲೆಕ್ಕ ಶೀರ್ಷಿಕೆ 2810-01-001-0-04-059 ಯಡಿ ರೂ.100.00 ಲಕ್ಷಗಳನ್ನು ಮತ್ತು MGRIREDಗೆ (ತರಬೇತಿ ಕೇಂದ್ರ) ರೂ.40.00 ಲಕ್ಷಗಳನ್ನು ಒದಗಿಸಲಾಗಿದೆ. ಈ ಹಿನ್ನೆಲೆ ಹಾಗೂ ರಾಜ್ಯದಲ್ಲಿ ವಿದ್ಯುತ್ ಕೊರತೆಯನ್ನು ನಿವಾರಿಸುವ ದಿಶೆಯಲ್ಲಿ, ಪರಿಸರ ಸಂರಕ್ಷಣೆ, ಅರಣ್ಯ ನಾಶ, ವಾಯು ಮಾಲಿನ್ಯತೆಯನ್ನು ತಡೆಗಟ್ಟಲು ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮವು ಪೂರಕವಾಗಿರುವುದರಿಂದ 2006-07ನೇ ಸಾಲಿಗೆ ಕಾರ್ಯಕ್ರಮವನ್ನು ಮುಂದುವರಿಸುವುದು ಅತ್ಯಗತ್ಯವಾಗಿರುತ್ತದೆ. ಪ್ರಯುಕ್ತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 13 ಗ್ರಾಇಂಕಾ 2006, ಬೆಂಗಳೂರು, ದಿನಾಂಕ:1ನೇ ಏಪ್ರಿಲ್, 2006**

ಪ್ರಸ್ತಾವನೆಯಲ್ಲಿ ವಿವರಿಸಲಾದಂತೆ ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮ ಹಾಗೂ ಸಿಬ್ಬಂದಿಗಳನ್ನು ರಾಜ್ಯದ 27 ಜಿಲ್ಲೆಗಳಲ್ಲೂ ಮುಂದುವರಿಸಿದೆ.

2006-07ನೇ ಸಾಲಿನಲ್ಲಿ ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮದ ಬ್ಲಾಕ್ ಸಹಾಯಾನುದಾನದಡಿ ಒಟ್ಟಾರೆ ರೂ.530.00 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2810-60-198-6-01 ರಡಿ ಒದಗಿಸಲಾಗಿದೆ.

ಸದರಿ ಕಾರ್ಯಕ್ರಮಕ್ಕೆ ಕೇಂದ್ರ ಹಾಗೂ ರಾಜ್ಯ ಪಾಲಿನ ಒಟ್ಟು ಅನುದಾನ ರೂ.530.00 ಲಕ್ಷಗಳನ್ನು ಆಯವ್ಯಯದಲ್ಲಿ ಒದಗಿಸಲಾಗಿದ್ದು, ಜಿಲ್ಲಾ ಮಟ್ಟದಲ್ಲಿ ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮವನ್ನು ಉಸ್ತುವಾರಿ ನೋಡಿಕೊಳ್ಳುತ್ತಿರುವ ಸಿಬ್ಬಂದಿ ವರ್ಗಗಳಾದ ಕಿರಿಯ ಅಭಿಯಂತರರು, ಕ್ಲರ್ಕ ಕಂ ಬೆರಳಚ್ಚುಗಾರರುಗಳ ವೇತನವನ್ನು ಕೇಂದ್ರ ಪಾಲಿನ ಅನುದಾನ ರೂ.275.00 ಲಕ್ಷಗಳಡಿಯೇ ಭರಿಸುವುದು. ಸದರಿ ಕಾರ್ಯಕ್ರಮದಡಿ ಕೇಂದ್ರ ಪಾಲಿಗೆ ಬಿಡುಗಡೆ ಮಾಡುವ ಅನುದಾನವನ್ನು ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮದ ಸಿಬ್ಬಂದಿಗಳಿಗೆ ಗ್ರಾಮ ಪಂಚಾಯಿತಿ ಕಾರ್ಯದರ್ಶಿಗಳು ಡ್ರಾ ಮಾಡಿ ಸಿಬ್ಬಂದಿ ವೆಚ್ಚ ಭರಿಸುವುದು.

| | | |
|---|---|---|
| 2501-04-105-0-01 | ರೂ.60.00 ಲಕ್ಷಗಳು | (ಯೋಜನಾ ಅನುಷ್ಠಾನ) ಅನುಬಂಧ-1ಅ ದಲ್ಲಿ ತೋರಿಸಿದ ಸಿಬ್ಬಂದಿ ವೆಚ್ಚಗಳಿಗಾಗಿ |
| 2501-04-105-0-02-059 | ರೂ.40.00 ಲಕ್ಷಗಳು | ತರಬೇತಿ ಕೇಂದ್ರ |
| 2810-01-001-0-04-059 | ರೂ.100.00 ಲಕ್ಷಗಳು | BERI ಯೋಜನೆ |

3. ವೇತನ ಮತ್ತಿತರ ಭತ್ಯೆಗಳನ್ನು ಸಂಪ್ರದಾಯವಲ್ಲದ ಇಂಧನ ಮೂಲಗಳ ಮಂತ್ರಾಲಯ, ನವದೆಹಲಿ ರವರ ಆಡಳಿತಾತ್ಮಕ ಅನುಮೋದನೆಯಲ್ಲಿ ಸೂಚಿಸಲಾದಂತೆ ಭರಿಸುವುದು.

4. ಈ ಆದೇಶವನ್ನು ಇಲಾಖಾ ಅಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅವರ ಟಿಪ್ಪಣಿ ಸಂಖ್ಯೆ ಗ್ರಾಅಪ 210 ಪಿಬಿಎಸ್ 2006 ದಿನಾಂಕ:01.04.2006ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳ**

ನಿರ್ದೇಶಕರು (ಗ್ರಾಮೂಸೌ) ಹಾಗೂ

ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ಅನುಬಂಧ-I**

**ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 13 ಗ್ರಾಇಂಕಾ 2006, ಬೆಂಗಳೂರು, ದಿನಾಂಕ 01.04.2006**

**ಅ). ರಾಜ್ಯ ಘಟಕದ ಹುದ್ದೆಗಳು :**

| ಕ್ರ.ಸಂ. | ಸೃಜಿಸಲಾದ ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಹುದ್ದೆಗಳ ಸಂಖ್ಯೆ |
|---|---|---|---|
| 1 | ಯೋಜನಾ ನಿರ್ದೇಶಕರು | 9580-14200 | ಒಂದು |
| 2 | ಲೆಕ್ಕ ಅಧೀಕ್ಷಕರು | 5575-10620 | ಒಂದು |
| 3 | ಶೀಘ್ರಲಿಪಿಗಾರರು | 3850-7050 ವಿ.ಭ.110/- | ಒಂದು |
| 4 | ಪ್ರಥಮ ದರ್ಜೆ ಸಹಾಯಕರು | 3850-7050 | ಒಂದು |
| 5 | ಬೆರಳಚ್ಚುಗಾರರು | 3000-5450 ವಿ.ಭ.90/- | ಎರಡು |
| 6 | ಗ್ರೂಫ್ ಡಿ ನೌಕರರು | 2600-4350 | ಒಂದು |

ಇ) ಜಿಲ್ಲಾವಾರು ಹುದ್ದೆಗಳು :

| ಕ್ರ.ಸಂ. | ಸೃಜಿಸಲಾದ ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಹುದ್ದೆಗಳ ಸಂಖ್ಯೆ |
|---|---|---|---|
| 2 | ಕಿರಿಯ ಅಭಿಯಂತರರು | 4575-8400 | ಒಂದು |
| 3 | ಬೆರಳಚ್ಚುಗಾರರು ಕಂ ಕ್ಲರ್ಕ | 3000-5450 ವಿ.ಭ.90/- | ಒಂದು |
| 4 | ವಾಹನ ಚಾಲಕ (ಬೆಂಗಳೂರು ಉತ್ತರ ತಾ:ಗೆ ಮಾತ್ರ) | 3000-5450 ವಿ.ಭ.90/- | ಒಂದು |

**ಎನ್. ಮಂಜುಳ**
ನಿರ್ದೇಶಕರು (ಗ್ರಾಮೂಸೌ) ಹಾಗೂ
ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

ಪಿ.ಆರ್.551

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಸುರೇಶ್ ಮತ್ತು ಇತರರು ತಮ್ಮನ್ನು ಸಕ್ರಮಗೊಳಿಸುವಂತೆ ಕೋರಿ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: 67/ 2006ರ ಸಂಬಂಧ ದಿನಗೂಲಿ ನೌಕರರನ್ನು ಸಕ್ರಮಗೊಳಿಸಲು ಸಂಖ್ಯಾತಿರಿಕ್ತ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** (1) ಕರ್ನಾಟಕ ಉಚ್ಚ ನ್ಯಾಯಾಲಯ ರಿಟ್ ಅರ್ಜಿ ಸಂಖ್ಯೆ: 11665-11865/1998 ಮತ್ತು 39117-176/99 ರಲ್ಲಿ ದಿನಾಂಕ: 15.12.1999 ರಂದು ನೀಡಿದ ತೀರ್ಪು.

(2) ರಿಟ್ ಅಪೀಲ್ ಸಂಖ್ಯೆ: 6677-7351/ 2000ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ: 24.01.2001ರಲ್ಲಿ ನೀಡಿದ ತೀರ್ಪು.

(3) ಸರ್ವೋಚ್ಚ ನ್ಯಾಯಾಲಯದ ಎಸ್‌ಎಲ್‌ಪಿ ಸಂಖ್ಯೆ: ಸಿಸಿ 109-498/ 03 ದಿನಾಂಕ: 21.07.2005 ರಂದು ನೀಡಿದ ತೀರ್ಪು.

(4) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 250 ಜಿಪಅ 2005, ದಿನಾಂಕ: 29.12.2005.

(5) ರೇಷ್ಮೆ ಆಯುಕ್ತರ ಪತ್ರದ ಸಂಖ್ಯೆ: ಸಿಬ್ಬಂದಿ2/ ದಿಗೂನೌ/ ಸೇಸ-75/ 05-06, ದಿನಾಂಕ:14.03.2006 ಹಾಗೂ 05.04.2006.

**ಪ್ರಸ್ತಾವನೆ:**

ದಿನಾಂಕ: 01.07.84ರ ನಂತರ ಸರ್ಕಾರದ ವಿವಿಧ ಇಲಾಖೆಗಳಲ್ಲಿ ದಿನಗೂಲಿ ನೌಕರರಾಗಿ ನೇಮಕಗೊಂಡ ಕೆಲವು ನೌಕರರು ತಮ್ಮ ಸೇವೆಯನ್ನು ಸಕ್ರಮಗೊಳಿಸುವಂತೆ ಕೋರಿ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 11665-11865/ 1998 ಮತ್ತು 39117-176/ 99 ಅನ್ನು ದಾಖಲಿಸಿರುತ್ತಾರೆ. ಸದರಿ ಪ್ರಕರಣದಲ್ಲಿ ನ್ಯಾಯಾಲಯವು ಮೇಲೆ ಓದಲಾದ ಕ್ರಮಸಂಖ್ಯೆ (1)ರಲ್ಲಿ ದಿನಾಂಕ: 15.12.99ರಂದು ತೀರ್ಪು ನೀಡಿ, ಈ ಪ್ರಕರಣಗಳಲ್ಲಿ ರಿಟ್ ಅರ್ಜಿ ಸಂಖ್ಯೆ: 33541-571/ 98 ರಲ್ಲಿ ದಿನಾಂಕ: 10.09.99ರಲ್ಲಿ ನೀಡಿರುವ ತೀರ್ಪಿನಂತೆ ಕ್ರಮ ತೆಗೆದುಕೊಳ್ಳಲು ಆದೇಶಿಸಿದೆ.

ದಿನಾಂಕ: 01.07.84ರ ನಂತರ ನೇಮಕಗೊಂಡ ದಿನಗೂಲಿ ನೌಕರರನ್ನು ಸಕ್ರಮಗೊಳಿಸುವ ವಿಷಯಕ್ಕೆ ಕುರಿತಂತೆ ಈಗಾಗಲೇ ಸಾಮಾನ್ಯ ಪ್ರಕರಣವು ಸರ್ವೋಚ್ಚ ನ್ಯಾಯಾಲಯದಲ್ಲಿ ಬಾಕಿ ಇರುವ ಹಿನ್ನಲೆಯಲ್ಲಿ ಮೇಲೆ ಓದಲಾದ ಕ್ರಮಸಂಖ್ಯೆ (1)ರ ಕರ್ನಾಟಕ ಉಚ್ಚ ನ್ಯಾಯಾಲಯದ ದಿನಾಂಕ: 15.12.99ರ ಆದೇಶದ ವಿರುದ್ಧ ಸರ್ಕಾರವು ರಿಟ್ ಅಪೀಲು ಸಂಖ್ಯೆ: 5697/ 2000 ಮತ್ತು 6677-7351/ 2000 ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ದಾಖಲಿಸಿತು. ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದಲ್ಲಿ ನ್ಯಾಯಾಲಯವು ಏಕಸದಸ್ಯ ಪೀಠದ ಅಭಿಪ್ರಾಯವನ್ನು ಒಪ್ಪಿ ರಿಟ್ ಅಪೀಲನ್ನು ವಜಾಗೊಳಿಸಿರುತ್ತದೆ. ಈ ತೀರ್ಪನ್ನು ಪ್ರಶ್ನಿಸಿ ಸರ್ಕಾರವು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿ ಎಸ್.ಎಲ್.ಪಿ. ಸಂಖ್ಯೆ: ಸಿಸಿ 109-498/ 2003 ಅನ್ನು ಸಲ್ಲಿಸಿತು. ಮೇಲೆ ಓದಲಾದ ಕ್ರಮಸಂಖ್ಯೆ (3)ರ ಆದೇಶದಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಎಸ್.ಎಲ್.ಪಿ. ಸಲ್ಲಿಸಲು ಹೆಚ್ಚಿನ ವಿಳಂಬ ಉಂಟಾಗಿದ್ದು ವಿಳಂಬಕ್ಕೆ ನೀಡಿರುವ ವಿವರಣೆಯು ತೃಪ್ತಿಕರವಾಗಿಲ್ಲವೆಂದು ಕಾರಣಕ್ಕೆ ವಿಳಂಬ ಮನ್ನಾ ಮಾಡಲು ತಿರಸ್ಕರಿಸಿತು.

ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಸರ್ಕಾರವು ಸಲ್ಲಿಸಿದ್ದ ಎಸ್.ಎಲ್.ಪಿ.ಯು ವಜಾಗೊಂಡ ಹಿನ್ನೆಲೆಯಲ್ಲಿ ರಿಟ್ ಅರ್ಜಿ ಸಂಖ್ಯೆ: 11665-11865/ 1998 ಮತ್ತು 39117-176/ 99ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನನ್ವಯ ತಮ್ಮನ್ನು ಸೇವೆಯಲ್ಲಿ ಸಕ್ರಮಗೊಳಿಸದೇ ಇರುವುದರಿಂದ ಕೆಲವು ದಿನಗೂಲಿ ನೌಕರರು ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: 67/ 2006 ನ್ನು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ದಾಖಲಿಸಿರುತ್ತಾರೆ. ರಿಟ್ ಅರ್ಜಿ ಸಂಖ್ಯೆ: 11655-11865/ 98, 39117-176/ 99 ರಲ್ಲಿನ ಅರ್ಜಿದಾರರಲ್ಲಿ ಈಗಾಗಲೇ ನ್ಯಾಯಾಲಯ ನಿಂದನಾ ಅರ್ಜಿ ಸಲ್ಲಿಸಿರುವ ಅರ್ಜಿದಾರರ ಪ್ರಕರಣಗಳಲ್ಲಿ ಸದರಿ ನೌಕರರ ಸೇವೆಯನ್ನು ಈಗಾಗಲೇ ಸಕ್ರಮಗೊಳಿಸಲಾಗಿದೆಯಾದ್ದರಿಂದ ಈಗ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: 67/ 2006ನ್ನು ಸಲ್ಲಿಸಿರುವ ರೇಷ್ಮೆ ಇಲಾಖೆಯ 55 ನೌಕರರನ್ನು ಸಕ್ರಮಗೊಳಿಸಲು ಸರ್ಕಾರವು ತೀರ್ಮಾನಿಸಿ, ಈ ಕುರಿತಂತೆ ಕ್ರಮ ಕೈಗೊಳ್ಳುವುದಕ್ಕಾಗಿ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: 67/ 20006ರಲ್ಲಿ ಒಳಗೊಂಡಿರುವ ನೌಕರರ ಕುರಿತಂತೆ ಮಾಹಿತಿಯನ್ನು ಒದಗಿಸುವಂತೆ ರೇಷ್ಮೆ ಇಲಾಖೆಯನ್ನು ಕೋರಲಾಯಿತು. ಮೇಲೆ ಓದಲಾದ ಕ್ರಮಸಂಖ್ಯೆ: (5)ರ ಪತ್ರಗಳಲ್ಲಿ ರೇಷ್ಮೆ ಆಯುಕ್ತರು ನ್ಯಾಯಾಲಯ ನಿಂದನಾ ಅರ್ಜಿಯಲ್ಲಿ ಒಳಗೊಂಡಿರುವ ನೌಕರರ ವಿವರಗಳನ್ನು ಒದಗಿಸಿ, ಈ ನೌಕರರುಗಳನ್ನು ಸಕ್ರಮಗೊಳಿಸಬೇಕಾದಲ್ಲಿ ಇಲಾಖೆಯಲ್ಲಿ ಸಿ ಮತ್ತು ಡಿ ವೃಂದದಲ್ಲಿ ಯಾವುದೇ ಹುದ್ದೆ ಖಾಲಿ ಇಲ್ಲದೆ ಇರುವುದರಿಂದ ಈ 55 ಜನರನ್ನು ಸಕ್ರಮಗೊಳಿಸುವುದಕ್ಕಾಗಿ 23 ಗ್ರೂಪ್-ಸಿ ಹಾಗೂ 32 ಗ್ರೂಪ್-ಡಿ ಹುದ್ದೆಗಳನ್ನು ಸೃಜಿಸಿ, ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ನ್ಯಾಯಾಲಯದ ಆದೇಶದ ಹಿನ್ನಲೆಯಲ್ಲಿ ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 64 ರೇಇವಿ 2006, ಬೆಂಗಳೂರು, ದಿನಾಂಕ: 7ನೇ ಏಪ್ರಿಲ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ನ್ಯಾಯಾಲಯ ತೀರ್ಪಿಗೆ ಒಳಪಟ್ಟು ರೇಷ್ಮೆ ಇಲಾಖೆಯಲ್ಲಿ ದಿನಾಂಕ: 01.07.1984ರ ನಂತರ ದಿನಗೂಲಿ ನೌಕರರಾಗಿ ಸೇವೆಗೆ ಸೇರಿದ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಹೇಳಿರುವ 55 ದಿನಗೂಲಿ ನೌಕರರ ಸೇವೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 250 ಜಿಪಅ 2005, ದಿನಾಂಕ: 29.12.2005ರ ಆದೇಶದ ಅನುಬಂಧ-1 ರಲ್ಲಿ ನಿಗದಿಪಡಿಸಿರುವ ನಿಬಂದನೆ ಮತ್ತು ಷರತ್ತುಗಳಿಗೊಳಪಟ್ಟು ಮಾಸಿಕ ವೇತನ ಸಿಬ್ಬಂದಿಯಾಗಿ ವಿಲೀನಗೊಳಿಸಲು, ಸದರಿ ನೌಕರರು 10 ವರ್ಷಗಳ ಸೇವೆ ಪೂರೈಸಿದ ಬಳಿಕ ಅವರ ಸೇವೆಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಯಲ್ಲಿ ಸಕ್ರಮಗೊಳಿಸಲು ಆದೇಶಿಸಿದೆ. ಈ ನೌಕರರನ್ನು ಸಕ್ರಮಗೊಳಿಸುವುದಕ್ಕಾಗಿ 23 ಗ್ರೂಪ್-ಸಿ ಹಾಗೂ 32 ಗ್ರೂಪ್-ಡಿ ಸಂಖ್ಯಾತಿರಿಕ್ತ ಹುದ್ದೆಗಳನ್ನು ಸೃಜಿಸಿದೆ. ಈ ದಿನಗೂಲಿ ನೌಕರರ ಸೇವೆಯನ್ನು ಸಕ್ರಮಗೊಳಿಸುವ ಆದೇಶವನ್ನು ಸಕ್ಷಮ ನೇಮಕಾತಿ ಪ್ರಾಧಿಕಾರಗಳು ಹೊರಡಿಸತಕ್ಕದ್ದು.

ಈ ಆದೇಶವನ್ನು ಮುಖ್ಯಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಸಿಎಸ್/ 1015/ 2006, ದಿನಾಂಕ: 23.03.2006ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಭಾರತಿ ಆರ್. ನಾಯಕ್**
ಪೀಠಾಧಿಕಾರಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ರೇಷ್ಮೆ).

**ಅನುಬಂಧ**
**ಸರ್ಕಾರದ ಆದೇಶ ಸಂಖ್ಯೆ: ವಾಕೈ 64 ರೇಇವಿ 2006, ದಿನಾಂಕ:07.04.2006**
**ಗ್ರೂಪ್- ಸಿ ವೃಂದ**

| ಕ್ರ. ಸಂ. | ಹೆಸರು ಮತ್ತು ಕಾರ್ಯನಿರ್ವಹಿಸುತ್ತಿರುವ ಸ್ಥಳ ಶ್ರೀ/ ಶ್ರೀಮತಿ | ಸಕ್ರಮಗೊಳಿಸಬೇಕಾದ ವೃಂದ | ರಿಟ್ ಅರ್ಜಿ ಸಂಖ್ಯೆ |
|---|---|---|---|
| 1. | ಕೆ.ಪಿ. ಮಹದೇವಸ್ವಾಮಿ ಬಿನ್ ಪುಟ್ಟನಂಜಪ್ಪ, ರೇಷ್ಮೆಗೂಡಿನ ಮಾರುಕಟ್ಟೆ, ಸಂತೆಮರಳ್ಳಿ. | ಗ್ರೂಪ್-ಸಿ | 11671/ 98 |
| 2. | ಎಸ್. ಜಯಣ್ಣ ಬಿನ್ ಶಿವಬಸಪ್ಪ, ರೇಷ್ಮೆಗೂಡಿನ ಮಾರುಕಟ್ಟೆ, ಸಂತೆಮರಳ್ಳಿ. | ಗ್ರೂಪ್-ಸಿ | 11676/ 98 |
| 3. | ಎಂ. ನಾಗೇಂದ್ರಚಾರಿ ಬಿನ್ ಮಹದೇವಚಾರಿ, ರೇಷ್ಮೆಗೂಡಿನ ಮಾರುಕಟ್ಟೆ, ಕೊಳ್ಳೇಗಾಲ. | ಗ್ರೂಪ್-ಸಿ | 39151/ 99 |
| 4. | ಕೆ. ನಾಗಮಣಿ ಬಿನ್ ಕೃಷ್ಣಉಪಾಧ್ಯಾಯ, ತಾಂತ್ರಿಕ ಸೇವಾ ಕೇಂದ್ರ, ಯಳಂದೂರು. | ಗ್ರೂಪ್-ಸಿ | 39123/99 |
| 5. | ಕೇಶವ ಕಳ್ಳಿಮನಿ ಬಿನ್ ಭೀಮರಾಯ ಕಳ್ಳಿಮನಿ, ರೇಷ್ಮೆಗೂಡಿನ ಮಾರುಕಟ್ಟೆ, ಜೇವರ್ಗಿ. | ಗ್ರೂಪ್-ಸಿ | 11719/ 98 |
| 6. | ರಾಜೇಂದ್ರ ಪಟ್ಟಣ ಬಿನ್ ಭೀಮೇಶಪಟ್ಟಣ, ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಜೇವರ್ಗಿ. | ಗ್ರೂಪ್-ಸಿ | 11718/ 98 |
| 7. | ಹೆಚ್.ಆರ್. ಮಂಜಶೆಟ್ಟಿ ಬಿನ್ ರಂಗಶೆಟ್ಟಿ, ತಾಂತ್ರಿಕ ಸೇವಾ ಕೇಂದ್ರ, ಶೀಳನೆರೆ, ಕೆ.ಆರ್.ಪೇಟೆ (ತಾ). | ಗ್ರೂಪ್-ಸಿ | 39923/ 99 |
| 8. | ಅಪ್ಪಾಜಿಗೌಡ ಬಿನ್ ಸಣ್ಣೇಗೌಡ, ದ್ವಿತಳಿ ಗೂಡಿನ ಮಾರುಕಟ್ಟೆ, ಕೆ.ಆರ್.ಪೇಟೆ. | ಗ್ರೂಪ್-ಸಿ | 11704/ 98 |
| 9. | ಎನ್.ಕೆ. ಕೃಷ್ಣಮೂರ್ತಿ ಬಿನ್ ಎನ್. ಕಾಳಯ್ಯ, ತಾಂತ್ರಿಕ ಸೇವಾ ಕೇಂದ್ರ, ನಾಗಮಂಗಲ. | ಗ್ರೂಪ್-ಸಿ | 11698/98 |
| 10. | ಹೆಚ್.ಸಿ. ಪುಟ್ಟರಾಮರಾಧ್ಯ ಬಿನ್ ಸಿದ್ದರಾಮರಾಧ್ಯ, ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಬೆಂಗಳೂರು ಉತ್ತರ ವಿಭಾಗ, ಯಲಹಂಕ, ಬೆಂಗಳೂರು. | ಗ್ರೂಪ್-ಸಿ | 11721/ 98 |
| 11. | ಎಸ್. ಬಸವರಾಜು ಬಿನ್ ಲೇಟ್ ಸಣ್ಣಪ್ಪ ತಾಂತ್ರಿಕ ಸೇವಾ ಕೇಂದ್ರ, ದೊಡ್ಡಗರುಡನಹಳ್ಳಿ. | ಗ್ರೂಪ್-ಸಿ | 11726/ 98 |
| 12. | ನಾಗೇಂದ್ರ ಬಿನ್ ಹೊಂಬಾಳೆಗೌಡ ರೇಷ್ಮೆಗೂಡಿನ ಮಾರುಕಟ್ಟೆ, ಮಳವಳ್ಳಿ. | ಗ್ರೂಪ್-ಸಿ | 39165/ 99 |
| 13. | ಶೇಷೇಗೌಡ ಬಿನ್ ಪಟೇಲ್ ಕಾಳೇಗೌಡ, ತಾಂತ್ರಿಕ ಸೇವಾ ಕೇಂದ್ರ, ಬೂಕನಕೆರೆ. | ಗ್ರೂಪ್-ಸಿ | 39161/ 99 |
| 14. | ಹೆಚ್. ಈರಣಗೌಡ ಬಿನ್ ಈರೇಗೌಡ, ತಾಂತ್ರಿಕ ಸೇವಾ ಕೇಂದ್ರ, ದೊಡ್ಡಗರುಡನಹಳ್ಳಿ. | ಗ್ರೂಪ್-ಸಿ | 39922/ 99 |
| 15. | ಡಿ. ರಾಮಚಂದ್ರಯ್ಯ ಬಿನ್ ರಾಮಲಿಂಗಯ್ಯ, ರೇಷ್ಮೆ ನಿರ್ದೇಶನಾಲಯ, ಬೆಂಗಳೂರು. | ಗ್ರೂಪ್-ಸಿ | 11695/ 98 |

| ಕ್ರ. ಸಂ. | ಹೆಸರು ಮತ್ತು ಕಾರ್ಯನಿರ್ವಹಿಸುತ್ತಿರುವ ಸ್ಥಳ ಶ್ರೀ/ ಶ್ರೀಮತಿ | ಸಕ್ರಮಗೊಳಿಸಬೇಕಾದ ವೃಂದ | ರಿಟ್ ಅರ್ಜಿ ಸಂಖ್ಯೆ |
|---|---|---|---|
| 16. | ಡಿ.ಎಸ್. ಪುಟ್ಟಲಕ್ಷ್ಮಮ್ಮ ಬಿನ್ ಸುಬ್ಬಾರಾವ್, ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು. | ಗ್ರೂಪ್-ಸಿ | 11697/ 98 |
| 17. | ಹೆಚ್.ಸಿ. ರಾಜು ಬಿನ್ ಚೌಡಯ್ಯ ರೇಷ್ಮೆ ಬಿತ್ತನೆ ಕೋಠಿ, ನಿಡಸಾಲೆ. | ಗ್ರೂಪ್-ಸಿ | 11689/ 98 |
| 18. | ವೀರೇಂದ್ರಕುಮಾರ್ ಬಿನ್ ಜ್ವಾಲಪತಯ್ಯ, ರೇಷ್ಮೆ ಬಿತ್ತನೆ ಕೋಠಿ, ಮರಳೂರು. | ಗ್ರೂಪ್-ಸಿ | 11711/ 98 |
| 19. | ಎಂ.ಸಿ. ದೇವರಾಜಪ್ಪ ಬಿನ್ ಚಿಕ್ಕಣ್ಣ, ರೇಷ್ಮೆಗೂಡಿನ ಮಾರುಕಟ್ಟೆ, ಶಿಡ್ಲಘಟ್ಟ. | ಗ್ರೂಪ್-ಸಿ | 11710/ 98 |
| 20. | ಹೆಚ್. ಪ್ರಕಾಶ್ ಬಿನ್ ಕಮಲಮ್ಮನ ಸಿದ್ದೇಗೌಡ, ರೇಷ್ಮೆ ಕೃಷಿ ಕ್ಷೇತ್ರ, ಹೆಚ್. ಮಲ್ಲಿಗೆರೆ. | ಗ್ರೂಪ್-ಸಿ | 11720/ 98 |
| 21. | ಎನ್.ಎನ್. ಜಯರಾಮ ಬಿನ್ ಕೆ.ಎಸ್. ನಿಂಗೇಗೌಡ, ತಾಂತ್ರಿಕಸೇವಾ ಕೇಂದ್ರ, ಶೀಲಸೆರೆ, ಕೆ.ಆರ್. ಪೇಟೆ (ತಾ). | ಗ್ರೂಪ್-ಸಿ | 39925/ 99 |
| 22. | ಮಲ್ಲೇಶ್ ಬಿನ್ ಸಿದ್ದಪ್ಪ, ರೇಷ್ಮೆ ಬಿತ್ತನೆ ಕೋಠಿ, ನಿಡಸಾಲೆ. | ಗ್ರೂಪ್-ಸಿ | 39162/ 99 |
| 23. | ಎಂ.ಆರ್. ಮಹಾದೇವ ಬಿನ್ ರಾಮನಾಯ್ಕ, ತಾಂತ್ರಿಕ ಸೇವಾ ಕೇಂದ್ರ, ಕೆ.ಆರ್. ನಗರ. | ಗ್ರೂಪ್-ಸಿ | 39174/ 99 |
| | **ಗ್ರೂಪ್-ಡಿ** | | |
| 1. | ಬಿ.ಎಸ್. ಸುರೇಶ್ ಬಿನ್ ಬಿ.ಕೆ. ಶಿವನಂಜಪ್ಪ, ತಾಂತ್ರಿಕ ಸೇವಾ ಕೇಂದ್ರ, ಚಾಮರಾಜನಗರ. | ಗ್ರೂಪ್-ಡಿ | 39136/ 99 |
| 2. | ಎಸ್. ರಾಮಪ್ರಸಾದ್ ಬಿನ್ ಲೇಟ್ ಸತ್ಯನಾರಾಯಣರಾವ್, ತಾಂತ್ರಿಕ ಸೇವಾ ಕೇಂದ್ರ, ಚನ್ನರಾಯಪಟ್ಟಣ. | ಗ್ರೂಪ್-ಡಿ | 11701/ 98 |
| 3. | ಜಯರಾಮ ಬಿನ್ ರಂಗೇಗೌಡ, ತಾಂತ್ರಿಕ ಸೇವಾ ಕೇಂದ್ರ, ಕೆ.ಆರ್. ಪೇಟೆ. | ಗ್ರೂಪ್-ಡಿ | 11684/ 98 |
| 4. | ದೇವರಾಜು ಬಿನ್ ಬಿ.ಸಿ. ಕೃಷ್ಣಯ್ಯ, ತಾಂತ್ರಿಕ ಸೇವಾ ಕೇಂದ್ರ, ನಾಗಮಂಗಲ. | ಗ್ರೂಪ್-ಡಿ | 39163/ 99 |
| 5. | ರಾಮಚಂದ್ರ ಬಿನ್ ಕೊಟಯ್ಯ, ರೇಷ್ಮೆಗೂಡಿನ ಮಾರುಕಟ್ಟೆ, ಕೆ.ಆರ್. ಪೇಟೆ. | ಗ್ರೂಪ್-ಡಿ | 11702/ 98 |
| 6. | ವಿ.ಆರ್. ಸುರೇಶ್ ಬಿನ್ ರಾಮೇಗೌಡ, ದ್ವಿತಳಿ ರೇಷ್ಮೆಗೂಡಿನ ಮಾರುಕಟ್ಟೆ, ಕೆ.ಆರ್. ಪೇಟೆ. | ಗ್ರೂಪ್-ಡಿ | 11692/ 98 |
| 7. | ಅಪ್ಪಣ್ಣ ಬಿನ್ ಚನ್ನಪ್ಪ ದ್ವಿತಳಿಗೂಡಿನ ಮಾರುಕಟ್ಟೆ, ಕೆ.ಆರ್. ಪೇಟೆ. | ಗ್ರೂಪ್-ಡಿ | 11693/ 98 |
| 8. | ಎಂ. ಹೊನ್ನಯ್ಯ ಬಿನ್ ಮೊಲ್ಲೇಗೌಡ, ರೇಷ್ಮೆ ಕೃಷಿ ಕ್ಷೇತ್ರ, ಹೆಚ್. ಮಲ್ಲಿಗೆರೆ. | ಗ್ರೂಪ್-ಡಿ | 11669/ 98 |
| 9. | ಸಿ.ಎಂ. ಸಿದ್ದರಾಜು ಬಿನ್ ಮಂಚಯ್ಯ, ರೇಷ್ಮೆ ಕೃಷಿ ಕ್ಷೇತ್ರ, ಹೆಚ್. ಮಲ್ಲಿಗೆರೆ. | ಗ್ರೂಪ್-ಡಿ | 11667/ 98 |
| 10. | ಪುಟ್ಟಸ್ವಾಮಿ ಬಿನ್ ಸಣ್ಣೇಗೌಡ, ರೇಷ್ಮೆ ಕೃಷಿ ಕ್ಷೇತ್ರ, ಹೆಚ್. ಮಲ್ಲಿಗೆರೆ. | ಗ್ರೂಪ್-ಡಿ | 11723/ 98 |
| 11. | ಶಂಕರ್ ಬಿನ್ ಜವರಶೆಟ್ಟಿ, ತಾಂತ್ರಿಕ ಸೇವಾ ಕೇಂದ್ರ, ಕೆ.ಆರ್.ಪೇಟೆ. | ಗ್ರೂಪ್-ಡಿ | 11685/ 98 |
| 12. | ಸೀತಾರಾಮು ಬಿನ್ ನೀಲೇಗೌಡ, ರೇಷ್ಮೆ ಕೃಷಿ ಕ್ಷೇತ್ರ, ಚಿಕ್ಕೋನಹಳ್ಳಿ. | ಗ್ರೂಪ್-ಡಿ | 11703/98 |
| 13. | ಕೆ.ಪಿ. ಕಾಂತರಾಜು ಬಿನ್ ಪುಟ್ಟಸ್ವಾಮಿಗೌಡ, ತಾಂತ್ರಿಕ ಸೇವಾ ಕೇಂದ್ರ, ಮಂಡ್ಯ. | ಗ್ರೂಪ್-ಡಿ | 39164/ 99 |
| 14. | ದೊಡ್ಡಬನ್ನೇರಿ ಬಿನ್ ದೊಡ್ಡರಾಮಯ್ಯ ರೇಷ್ಮೆ ಕೃಷಿ ಕ್ಷೇತ್ರ, ಹೆಚ್. ಮಲ್ಲಿಗೆರೆ. | ಗ್ರೂಪ್-ಡಿ | 11668/ 98 |
| 15. | ಎಸ್.ಕೆ. ಮುನಿನರಸಿಂಹಯ್ಯ ಬಿನ್ ಕದಿರಪ್ಪ, ರೇಷ್ಮೆ ಬಿತ್ತನೆ ಕೋಠಿ, ಸೂಲಿಬೆಲೆ. | ಗ್ರೂಪ್-ಡಿ | 11715/ 98 |

| ಕ್ರ. ಸಂ. | ಹೆಸರು ಮತ್ತು ಕಾರ್ಯನಿರ್ವಹಿಸುತ್ತಿರುವ ಸ್ಥಳ ಶ್ರೀ/ ಶ್ರೀಮತಿ | ಸಕ್ರಮಗೊಳಿಸಬೇಕಾದ ವೃಂದ | ರಿಟ್ ಅರ್ಜಿ ಸಂಖ್ಯೆ |
|---|---|---|---|
| 16. | ಹುಚ್ಚಪ್ಪ ಬಿನ್ ಮುನಿಯಪ್ಪ, ರೇಷ್ಮೆ ಬಿತ್ತನೆ ಕೋಠಿ, ಸೂಲಿಬೆಲೆ. | ಗ್ರೂಪ್-ಡಿ | 11705/ 98 |
| 17. | ಪಿ. ಶಿವಶಂಕರಪ್ಪ ಬಿನ್ ಪುಟ್ಟಪ್ಪ, ರೇಷ್ಮೆ ಬಿತ್ತನೆ ಕೋಠಿ, ಸೂಲಿಬೆಲೆ. | ಗ್ರೂಪ್-ಡಿ | 11714/ 98 |
| 18. | ವೈ.ಎಸ್. ಅಮರನಾಥ ಬಿನ್ ಶ್ರೀರಾಮಯ್ಯ ರೇಷ್ಮೆ ಬಿತ್ತನೆ ಕೋಠಿ, ಸೂಲಿಬೆಲೆ. | ಗ್ರೂಪ್-ಡಿ | 11708/ 98 |
| 19. | ಪಿ. ಮುನಿರಾಜು ಬಿನ್ ಪೆದ್ದಯ್ಯ, ರೇಷ್ಮೆ ಬಿತ್ತನೆ ಕೋಠಿ, ಸೂಲಿಬೆಲೆ. | ಗ್ರೂಪ್-ಡಿ | 11707/ 98 |
| 20. | ಟಿ.ಸಿ. ಚಂದ್ರ ಬಿನ್ ಚಲುವೇಗೌಡ, ತಾಂತ್ರಿಕ ಸೇವಾ ಕೇಂದ್ರ, ಸಾಲಿಗ್ರಾಮ. | ಗ್ರೂಪ್-ಡಿ | 11682/ 98 |
| 21. | ಕೆ.ಆರ್. ವೆಂಕಟರಮಣಪ್ಪ ಬಿನ್ ರಾಮಯ್ಯ, ರೇಷ್ಮೆಗೂಡಿನ ಮಾರುಕಟ್ಟೆ, ಕೋಲಾರ. | ಗ್ರೂಪ್-ಡಿ | 11691/ 98 |
| 22. | ನಾನಾಗೌಡ ಶಂಕರಪ್ಪ ತಂಗಡಿ ಬಿನ್ ಶಂಕರಪ್ಪ, ರೇಷ್ಮೇಗೂಡಿನ ಮಾರುಕಟ್ಟೆ, ಶಿಡ್ಲಘಟ್ಟ. | ಗ್ರೂಪ್-ಡಿ | 11709/ 98 |
| 23. | ವಿ.ಸಿ. ಸುರೇಶ್ ಬಿನ್ ಚನ್ನಯ್ಯ, ತಾಂತ್ರಿಕ ಸೇವಾ ಕೇಂದ್ರ, ತೊರೆಶೆಟ್ಟಿಹಳ್ಳಿ. | ಗ್ರೂಪ್-ಡಿ | 39924/ 99 |
| 24. | ಕುಮಾರ ಬಿನ್ ಬಸಪ್ಪ, ತಾಂತ್ರಿಕ ಸೇವಾ ಕೇಂದ್ರ, ಕೆ.ಆರ್. ಪೇಟೆ. | ಗ್ರೂಪ್-ಡಿ | 11683/ 98 |
| 25. | ಎಸ್.ಎಸ್. ರುದ್ರಪ್ಪ ಬಿನ್ ಎಸ್.ಆರ್. ಶಿವಣ್ಣ, ತಾಂತ್ರಿಕ ಸೇವಾ ಕೇಂದ್ರ, ದುದ್ದ, ಮಂಡ್ಯ ಜಿಲ್ಲೆ. | ಗ್ರೂಪ್-ಡಿ | 11686/ 98 |
| 26. | ಎಂ.ಎಸ್. ಶಾಂತಮೂರ್ತಿ ಬಿನ್ ಲೇಟ್ ಶಿವಪ್ಪ, ರೇಷ್ಮೆ ಗೂಡಿನ ಮಾರುಕಟ್ಟೆ, ಕೊಳ್ಳೇಗಾಲ. | ಗ್ರೂಪ್-ಡಿ | 39149/ 99 |
| 27. | ನಾಗಣ್ಣ ಬಿನ್ ನಂಜಪ್ಪ, ತಾಂತ್ರಿಕ ಸೇವಾ ಕೇಂದ್ರ, ಚಾಮರಾಜನಗರ. | ಗ್ರೂಪ್-ಡಿ | 39175/ 99 |
| 28. | ಸೋಮಣ್ಣ ಬಿನ್ ರಾಮಯ್ಯ, ರೇಷ್ಮೆಗೂಡಿನ ಮಾರುಕಟ್ಟೆ, ಸಂತೆಮರಳ್ಳಿ. | ಗ್ರೂಪ್-ಡಿ | 11673/ 98 |
| 29. | ಎಸ್.ಎಂ. ನಾಗರಾಜು ಬಿನ್ ಮುದ್ದೂರಯ್ಯ, ತಾಂತ್ರಿಕ ಸೇವಾ ಕೇಂದ್ರ, ಕೆ.ಆರ್. ನಗರ. | ಗ್ರೂಪ್-ಡಿ | 39126/ 99 |
| 30. | ದಶರಥ ಬಿನ್ ಪುಟ್ಟಪ್ಪ, ತಾಂತ್ರಿಕ ಸೇವಾ ಕೇಂದ್ರ, ಕೆ.ಆರ್. ನಗರ. | ಗ್ರೂಪ್-ಡಿ | 39125/ 99 |
| 31. | ಕೆ.ವಿ. ವಿರೇಗೌಡ ಬಿನ್ ವಿರೇಗೌಡ, ತಾಂತ್ರಿಕಸೇವಾ ಕೇಂದ್ರ, ಟಿ. ನರಸೀಪುರ. | ಗ್ರೂಪ್-ಡಿ | 39128/ 99 |
| 32. | ಮಾದಶೆಟ್ಟಿ ಬಿನ್ ವೀರಶೆಟ್ಟಿ, ತಾಂತ್ರಿಕ ಸೇವಾ ಕೇಂದ್ರ, ಚಿಲಕವಾಡಿ | ಗ್ರೂಪ್-ಡಿ | 39130/ 99 |

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ರೇಷ್ಮೆ).

ಪಿ.ಆರ್.600

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕೃಷ್ಣೇಗೌಡ, ಮಾಜಿ ಎ.ಆರ್.ಎಸ್.ಐ., 8ನೇ ಪಡೆ, ಕೆ.ಎಸ್.ಆರ್.ಪಿ., ರವರು ಪುನರ್ ನೇಮಕಾತಿ ಮಾಡುವ ಬಗ್ಗೆ ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಐಜಿಪಿ ಕೆಎಸ್‌ಆರ್‌ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ:ಡಿಇ/3/2002-03, ದಿನಾಂಕ:27-11-2003.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಇವರ ಆದೇಶ ಸಂಖ್ಯೆ:ಅಪೀಲು /6/6/2004-05, ದಿನಾಂಕ:06-12-2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:09-06-05.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/6/6/ 2004-05, ದಿನಾಂಕ:12-08-2005.

**ಪ್ರಸ್ತಾವನೆ:**

ಶ್ರೀ ಕೃಷ್ಣೇಗೌಡ ಮಾಜಿ ಎಆರ್‌ಎಸ್‌ಐ, 8ನೇ ಪಡೆ, ಕೆಎಸ್‌ಆರ್‌ಪಿ ಶಿವಮೊಗ್ಗ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1) "ಶ್ರೀ ಕೃಷ್ಣೇಗೌಡ, ಎಆರ್‌ಎಸ್‌ಐ `ಎ` ದಳ ನೀವುಗಳು ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಘಟಕದಲ್ಲಿ ದಿನಾಂಕ:16-07-1971ರಂದು ಸೇವೆಗೆ ಭರ್ತಿ ಹೊಂದಿ, ಹಾಲಿ 8ನೇ ಪಡೆ ಕೆಎಸ್‌ಆರ್‌ಪಿ ಶಿವಮೊಗ್ಗದಲ್ಲಿ ಸೇವೆಯಲ್ಲಿರುತ್ತೀರಿ. ನೀವು ಶಿಸ್ತಿನ ಇಲಾಖೆಯಲ್ಲಿದ್ದು, ನಿಮಗೆ ಈ ಕಚೇರಿಯ ಯಾವುದೇ ಪತ್ರ ವ್ಯವಹಾರ ಅಥವಾ ಹಣಕಾಸಿನ ವ್ಯವಹಾರವನ್ನು ನಡೆಸಲು ಯಾವುದೇ ರೀತಿಯ ಅಧಿಕಾರವಿಲ್ಲದಿದ್ದಾಗ್ಯೂ, ನೀವು ಶಿವಮೊಗ್ಗ ಜಿಲ್ಲಾ ಸಹಕಾರ ಬ್ಯಾಂಕ್ ನಿಯಮಿತ, ಶಿವಮೊಗ್ಗ ಶಾಖೆಗೆ ತಾವೇ ವೇತನ ಬಟವಾಡೆ ಅಧಿಕಾರಿಯೆಂದು ಲಿಖಿತ ಮನವಿ ಸಲ್ಲಿಸಿ, ಕರ್ತವ್ಯ ಲೋಪ ಎಸಗಿದ್ದೀರಿ.``

**2) "ಶ್ರೀ ಕೃಷ್ಣೇಗೌಡ, ಎಆರ್‌ಎಸ್‌ಐ 'ಎ' ದಳ ನೀವು 8ನೇ ಪಡೆ, ಕೆಎಸ್‌ಆರ್‌ಪಿ, ಶಿವಮೊಗ್ಗ ಕಛೇರಿ, ಹಾಗೂ ಕಛೇರಿಯ ಮುಖ್ಯಸ್ಥರ ಮೊಹರನ್ನು ನಕಲು ಮಾಡಿಕೊಂಡು, ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೆಎಸ್‌ಆರ್‌ಪಿ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 27.11.2003ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿರುತ್ತಾರೆ.**

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರು ಎಸಗಿರುವ ಕೃತ್ಯ ಗಂಭೀರ ಸ್ವರೂಪದ್ದಾಗಿದೆಯೆಂದು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:06-12-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪೊಲೀಸ್ ಇಲಾಖೆಯಲ್ಲಿ ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ಕರ್ತವ್ಯ ಲೋಪ, ವಂಚನೆ, ದ್ರೋಹ ದುರ್ನಡತೆ ಎಸಗಿರುವುದು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿ ರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಗುರುತರವಾದ ಗಂಭೀರ ಸ್ವರೂಪದ ಆರೋಪಗಳಾಗಿರುತ್ತವೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 66 ಪೊಸಿಅ 2005, ಬೆಂಗಳೂರು, ದಿನಾಂಕ: 18ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೃಷ್ಣೇಗೌಡ, ಮಾಜಿ ಎಆರ್‌ಎಸ್‌ಐ 8ನೇ ಪಡೆ, ಕೆಎಸ್‌ಆರ್‌ಪಿ., ಶಿವಮೊಗ್ಗ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:09-06-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್.493

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಂ.ನಾರಾಯಣ, ಮಾಜಿ ಎಪಿಸಿ-100, ಡಿಎಆರ್., ಚಿಕ್ಕಮಗಳೂರು ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಇವರ ಆದೇಶ ಸಂಖ್ಯೆ:ಡಿಇ/9/2002 ಓಬಿ ಸಂಖ್ಯೆ:285/03, ದಿನಾಂಕ:03-09-2003.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ/ಮೇಲ್ಮನವಿ/12/2003-04, ದಿನಾಂಕ:10-06-2004.
3) ಅರ್ಜಿದಾರರ ಪರೀಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:14-02-2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/34/2005, ದಿನಾಂಕ:30-04-2005.

**ಪ್ರಸ್ತಾವನೆ:**

ಶ್ರೀ ಎಂ.ನಾರಾಯಣ, ಎಪಿಸಿ-100 ಡಿಎಆರ್ ಚಿಕ್ಕಮಗಳೂರು ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಶ್ರೀ ಸಿ.ವಿ.ಮಕ್ಬೂಲ್ ಪಾಶಾ ಎಪಿಸಿ-34 (ಹಿಂದೆ ಸಿಪಿಸಿ-66) ಮತ್ತು ಶ್ರೀ ಎಂ.ನಾರಾಯಣ ಎಪಿಸಿ-100 (ಹಿಂದೆ ಎಪಿಸಿ-107) ಡಿಎಆರ್ ಚಿಕ್ಕಮಗಳೂರು ರವರು ದಿನಾಂಕ:31-03-1995ರಂದು ಚಿಕ್ಕಮಗಳೂರು ಗ್ರಾಮಾಂತರ ಠಾಣೆಯ ಪೊಲೀಸ್ ವೃತ್ತ ನಿರೀಕ್ಷಕರವರ ಹತ್ತಿರ ಇಲಾಖಾ ವಿಚಾರಣೆಗೆ ಹಾಜರಾಗಲು ನೇಮಕ ಮಾಡಿದ್ದು, ಎಪಿಓ ರವರು ಅದೇ ದಿನ ಸಕಲೇಶಪುರ ತಾಲ್ಲೂಕ್, ಹಳಿಯೂರು ಗ್ರಾಮಕ್ಕೆ ಕಾರನ್ನು ಬಾಡಿಗೆಗೆ ತೆಗೆದುಕೊಂಡು ಹೋಗಿ, ಶ್ರೀ ಹೆಚ್.ಎ.ಪಾಪಣ್ಣ, ಎಂಬುವವರಿಗೆ ಖೈದಿ ದಿವಾಕರನು ಕೊಟ್ಟಿರುವ 3 ಎಳೆ ಚಿನ್ನದ ಸರ ಮತ್ತು ಒಂದು ಉಂಗುರ ಕೊಡುವಂತೆ ಕೇಳಿದ್ದು, ಎಪಿಓ ರವರನ್ನು ಶ್ರೀ ಹೆಚ್.ಎ.ಪಾಪಣ್ಣರವರು `ನೀವು ಯಾರೆಂದು` ಕೇಳಿದಾಗ, ಎಪಿಓ ರವರು ತಾವು ಚಿಕ್ಕಮಗಳೂರಿನ ರವಿ ಮತ್ತು ಆನಂದೇಗೌಡ ಎಂಬ ಪೊಲೀಸ್‌ರೆಂದು ಹೇಳಿ, ಸದ್ರಿಯವರಿಗೆ ಹೆದರಿಸಿ, ಅವರಿಂದ 3 ಎಳೆ ಚಿನ್ನದ ಸರ ಹಾಗೂ ಒಂದು ಉಂಗುರವನ್ನು ಪಡೆದುಕೊಂಡು ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು ಸಾರ್ವಜನಿಕರಿಗೆ ಹೆದರಿಸಿ, ಘೋರಾಪರಾದವೆಸಗಿರುತ್ತೀರಿ."

" 2) ಎಪಿಓ ರವರಿಗೆ ದಿನಾಂಕ:26-04-1995ರಂದು ಬೆಳಿಗ್ಗೆ 8-00 ಗಂಟೆಗೆ ರೋಲ್‌ಕಾಲ್‌ನಲ್ಲಿ ಮೂಡಿಗೆರೆ ಅಪರಾಧಿ ಬೆಂಗಾವಲಿಗೆ ಬಂದೂಕು, ಗುಂಡು ಮತ್ತು ಕೈಕೊಳ ನೀಡಿ, ಬೆಂಗಾವಲು ಕರ್ತವ್ಯಕ್ಕೆ ನೇಮಕ ಮಾಡಿದ್ದು, ನೀವು ಜಿಲ್ಲಾ ಉಪ ಕಾರಾಗೃಹದಿಂದ ಸುಧಾಕರ ಯಾಸ್ ದಿವಾಕರನನ್ನು ಮೂಡಿಗೆರೆ ನ್ಯಾಯಾಲಯಕ್ಕೆ ಕರೆದುಕೊಂಡು ಹೋಗಿ, ಅಲ್ಲಿ ಆ ದಿನ ಮಾನ್ಯ ನ್ಯಾಯಾಧೀಶರು ನ್ಯಾಯಾಲಯಕ್ಕೆ ಅರ್ಧ ದಿನ ರಜೆ ಮಾಡಿ ಬರುವ ವಿಚಾರ ತಿಳಿದು, ಖೈದಿ ಸುಧಾಕರ ಯಾಸ್ ದಿವಾಕರನನ್ನು ಬಾಡಿಗೆ ಕಾರಿನಲ್ಲಿ ಕೂರಿಸಿಕೊಂಡು ಸಕಲೇಶಪುರ ತಾಲ್ಲೂಕು, ಹೆತ್ತೂರು ಗ್ರಾಮಕ್ಕೆ ಕರೆದುಕೊಂಡು ಹೋಗಿ, ಕುಶಾಲ್‌ರಾಜ್ ರವರಿಗೆ ಖೈದಿಯನ್ನು ತೋರಿಸಿ, ತಾವು ಚಿಕ್ಕಮಗಳೂರಿನ ರವಿ ಮತ್ತು ಆನಂದೇಗೌಡ ಎಂಬ ಪೊಲೀಸ್‌ರು ಎಂದು ಹೇಳಿ, ದಿವಾಕರನು ಕೊಟ್ಟ ನೆಕ್ಲೇಸ್ ಕೊಡುವಂತೆ ಕೇಳಿದ್ದು, ಸದರಿಯವರು ತಾವು ತೆಗೆದುಕೊಂಡಿಲ್ಲವೆಂದು ಹೇಳಿದ್ದಕ್ಕೆ, ನಿಮ್ಮನ್ನು ಕಾರಿನಲ್ಲಿ ಎಳೆದುಕೊಂಡು ಹೋಗುತ್ತೇವೆಂದು ಹೆದರಿಸಿ, ಕುಶಾಲ್‌ರಾಜ್ ರವರ ಹೆಂಡತಿಯು ತನ್ನ ತಾಯಿ ಮಾಡಿಸಿಕೊಟ್ಟಿದ್ದೆಂದು ಹೇಳಿದರೂ ಸಹ ಕೇಳದೆ, ನೆಕ್ಲೇಸನ್ನು ಕಿತ್ತುಕೊಂಡು, ಕಾರಿನ ಬಾಡಿಗೆ ರೂ.2000-00 ಗಳನ್ನು ಕುಶಾಲ್‌ರಾಜ್ ರವರಿಂದ ಪಡೆದುಕೊಂಡು ಅಧಿಕಾರ ದುರುಪಯೋಗಪಡಿಸಿಕೊಂಡು ಘೋರಾಪರಾಧವೆಸಗಿರುತ್ತೀರಿ."

"3) ಈ ಮೇಲ್ಕಂಡ ಆಪಾದನೆಗಳಿಗಾಗಿ, ಮೂಡಿಗೆರೆ ಠಾಣೆ ಮೊ.ಸಂಖ್ಯೆ:76/95, ಕಲಂ/392 ಐಪಿಸಿ ಹಾಗೂ ಯಸಳೂರು ಪೊಲೀಸ್ ಠಾಣೆ, ಮೊ.ಸಂಖ್ಯೆ:56/95, ಕಲಂ 392 ಐಪಿಸಿ ಜೊತೆಗೆ, ವೃತ್ತ ನಿರೀಕ್ಷಕರು, ಸಕಲೇಶಪುರ ವೃತ್ತ ಇವರು ಮಾನ್ಯ ನ್ಯಾಯಾಲಯದಲ್ಲಿ ಸಲ್ಲಿಸಿರುವ ದೋಷಾರೋಪಣಾ ಪತ್ರ ಸಂಖ್ಯೆ:`49/95 ಎ`ರಲ್ಲಿ ಕಲಂ 384 ಐಪಿಸಿ, ದಿನಾಂಕ:31-03-95ರಲ್ಲಿ ಹಾಗೂ `47/95 ಬಿ` ಕಲಂ 384, ದಿನಾಂಕ:14-09-95ರಲ್ಲಿ ಆರೋಪಿತರಾಗಿ ಕಂಡುಬಂದಿದ್ದು, ಇಲಾಖಾ ಗೌರವಗಳಿಗೆ ಕುಂದುಂಟು ಮಾಡಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:03-09-2003ರ ಆದೇಶದಲ್ಲಿ ಇನ್ನೊಂದು ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ಅರ್ಜಿದಾರರನ್ನು `ಸೇವೆಯಿಂದ ವಜಾ` ಮಾಡಿರುವುದರಿಂದ, ಈ ಪ್ರಕರಣದ ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶ ತಾತ್ಕಾಲಿಕವಾಗಿ ಸ್ಥಗಿತಗೊಳಿಸಿದೆ ಎಂದು ತಿಳಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿಯು ಇವರ ಮೇಲಿನ ಇನ್ನೊಂದು ಇಲಾಖಾ ವಿಚಾರಣೆಯಲ್ಲಿ ಮಾನ್ಯ ನ್ಯಾಯಾಲಯವು ಕ್ರಿಮಿನಲ್ ಪ್ರಕರಣದಲ್ಲಿ ಶಿಕ್ಷೆ ವಿಧಿಸಿ, ತೀರ್ಪು ನೀಡಿದ್ದ ಕಾರಣ, ದಿನಾಂಕ:11-08-2003ರಂದು ಇವರನ್ನು ಸೇವೆಯಿಂದ ವಜಾ ಮಾಡಿದ್ದು, ಶಿಸ್ತು ಪ್ರಾಧಿಕಾರಿಯ ಆದೇಶ ಸಮಂಜಸವಾಗಿದೆ ಎಂದು ತಿಳಿಸಿ, ಮೇಲ್ಮನವಿಯನ್ನು ಪರಿಶೀಲಿಸುವ ಪ್ರಶ್ನೆ ಉದ್ಭವಿಸುವುದಿಲ್ಲವೆಂದು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:10-06-2004ರ ಆದೇಶದಲ್ಲಿ ತಿಳಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಇನ್ನೊಂದು ಪ್ರಕರಣದಲ್ಲಿ ಪಿಸಿ ಶ್ರೀ ಮಂಜುನಾಥ ಇವರು ಮನೆಯಲ್ಲಿ ಇಲ್ಲದ ವೇಳೆಯಲ್ಲಿ ಅವರ ಮನೆಗೆ ಕಾಗದ ಕೊಡುವ ನೆಪದಲ್ಲಿ ಹೋಗಿ ಅವರ ಪತ್ನಿಯ ಮೇಲೆ ಅತ್ಯಾಚಾರ ಎಸಗಿ, ಅಶ್ಲೀಲ ಚಿತ್ರಗಳನ್ನು ತೆಗೆದು ಆಕೆಗೆ ತೋರಿಸಿ, ಹೆದರಿಸಿ ಹಣ ವಸೂಲಿ ಮಾಡಿದ ಹಿನ್ನೆಲೆಯಲ್ಲಿ ನ್ಯಾಯಾಲಯದಲ್ಲಿ ಶಿಕ್ಷೆ ವಿಧಿಸಿ, ತೀರ್ಪು ನೀಡಿದ ಕಾರಣ ಇವರನ್ನು ದಿನಾಂಕ:11-08-2003ರಂದು ಸೇವೆಯಿಂದ ವಜಾಗೊಳಿಸಿದೆ. ಅರ್ಜಿದಾರರು ಬೇರೆ ಬೇರೆ ಪ್ರಕರಣಗಳಲ್ಲಿ ಹಲವು ಆರೋಪಗಳನ್ನು ಎದುರಿಸುತ್ತಿದ್ದು, ಇವರು ಎಸಗಿರುವ ಅಪರಾಧಕ್ಕೆ ಈಗಾಗಲೇ ಸೇವೆಯಿಂದ ವಜಾಗೊಂಡಿರುವ ಶಿಕ್ಷೆಯನ್ನು ಅನುಭವಿಸುತ್ತಿದ್ದಾರೆ. ಹಿಂದಿನ ಪ್ರಕರಣ ಇನ್ನು ರಾಜ್ಯ ಉಚ್ಛ ನ್ಯಾಯಾಲಯದಲ್ಲಿ ಬಾಕಿ ಇರುವುದರಿಂದ, ಪ್ರಸ್ತುತ ಪ್ರಕರಣದಲ್ಲಿ ಶಿಕ್ಷೆ ವಿಧಿಸಿ, ಆದೇಶ ಹೊರಡಿಸಿರುವುದಿಲ್ಲ. ಆದ್ದರಿಂದ ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪರಿಗಣಿಸಲು ಯಾವುದೇ ಸಮರ್ಥನೆ ಇರುವುದಿಲ್ಲವೆಂದು ಭಾವಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 74 ಪೊಸಿಅ 2006, ಬೆಂಗಳೂರು, ದಿನಾಂಕ: 18ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ನಾರಾಯಣ, ಮಾಜಿ ಎಪಿಸಿ-100 ಡಿಎಆರ್, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:14-02-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್.494

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).